CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೫, ೨೦೦೩ (ಆಶ್ವಯುಜ ೩, ಶಕ ವರ್ಷ ೧೯೨೫) | ಸಂಚಿಕೆ ೩೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

**ಆರ್ಥಿಕ ಸಚಿವಾಲಯ**

**ವಿಷಯ:** ತೆರಿಗೆ ಪಾವತಿಸದ ಮದ್ಯಗಳನ್ನು ಅಕ್ರಮವಾಗಿ ಸಾಗಾಣಿಕೆ ಮಾಡಲು ಅನುವು ಮಾಡಿಕೊಟ್ಟ ಕೆಲವು ಡಿಸ್ಟಿಲರಿಗಳಲ್ಲಿನ ಅಬಕಾರಿ ಅಧೀಕ್ಷಕರ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯದ ವಿವಿಧ ಭಾಗಗಳಲ್ಲಿ ತೆರಿಗೆ ಪಾವತಿಸದ ಮದ್ಯಗಳ ಮಾರಾಟ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಇದರಿಂದ ಆಗಸ್ಟ್ ತಿಂಗಳಲ್ಲಿ ಇದುವರೆಗೆ ಕರ್ನಾಟಕ ರಾಜ್ಯ ಪಾನೀಯ ನಿಗಮದ ಮೂಲಕ ನಡೆದ ವಹಿವಾಟು ಸಹ ಕುಂಠಿತಗೊಂಡು ಸರ್ಕಾರದ ರಾಜಸ್ವಕ್ಕೆ ನಷ್ಟ ಉಂಟಾಗುತ್ತಿದೆ. ಮುಖ್ಯವಾಗಿ ಈ ಕೆಳಕಂಡ ಡಿಸ್ಟಿಲರಿಗಳಿಂದ ತೆರಿಗೆ ಪಾವತಿಸದ ಮದ್ಯಗಳು ಹೊರ ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ.

1. ಪಂಪಸಾರ ಡಿಸ್ಟಿಲರಿ, ಹೊಸಪೇಟೆ, ಬಳ್ಳಾರಿ ಜಿಲ್ಲೆ.
2. ಜೆ.ಪಿ. ಡಿಸ್ಟಿಲರಿ ಪ್ರೈ ಲಿ., ದಾಸನಪುರ ತುಮಕೂರು ರಸ್ತೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
3. ಕೆ.ಬಿ.ಡಿ. ಪ್ರೈ ಲಿ., ಘಟಕ-1 9ನೇ ಮೈಲಿ, ತುಮಕೂರು ರಸ್ತೆ, ಬೆಂಗಳೂರು.
4. ಕೆ.ಬಿ.ಡಿ. ಪ್ರೈ ಲಿ.ದ ಘಟಕ-2, 20ನೇ ಮೈಲಿ, ತುಮಕೂರು ರಸ್ತೆ, ಬೆಂಗಳೂರು.
5. ನ್ಯಾಷನಲ್ ಡಿಸ್ಟಿಲರೀಸ್ ಮತ್ತು ಅಲೈಡ್ ಪ್ರಾಡಕ್ಟ್ಸ್ ಮೈಸೂರು ರಸ್ತೆ, ಬೆಂಗಳೂರು.

ಸದರಿ ಡಿಸ್ಟಿಲರಿಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಅಬಕಾರಿ ಅಧೀಕ್ಷಕರುಗಳ ಕರ್ತವ್ಯ ನಿರ್ಲಕ್ಷತೆಯಿಂದ ತೆರಿಗೆ ಪಾವತಿಸದ ಮದ್ಯಗಳು ಅಕ್ರಮವಾಗಿ ಡಿಸ್ಟಿಲರಿಗಳಿಂದ ಹೊರ ಹೋಗಲು ಕಾರಣ ಎಂಬುದು ಮೇಲ್ನೋಟಕ್ಕೆ ಕಂಡು ಬಂದಿದೆ.

1. ಶ್ರೀ ಸಿ.ಎಫ್. ಹಾದಿಮನಿ, ಅಬಕಾರಿ ಅಧೀಕ್ಷಕ (ಪ್ರಭಾರ)
   ಪಂಪಸಾರ ಡಿಸ್ಟಿಲರಿ, ಹೊಸಪೇಟೆ, ಬಳ್ಳಾರಿ ಜಿಲ್ಲೆ.
2. ಶ್ರೀ ಪಿ.ಆರ್. ವೇಣುಗೋಪಾಲ ರೆಡ್ಡಿ ಅಬಕಾರಿ ಅಧೀಕ್ಷಕ
   ಜೆ.ಪಿ. ಡಿಸ್ಟಿಲರಿ ಪ್ರೈ ಲಿ., ದಾಸನಪುರ ತುಮಕೂರು ರಸ್ತೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
3. ಶ್ರೀ ಬಿ.ಸಿ. ಮಲ್ಲಾರಾಧ್ಯ ಅಬಕಾರಿ ಅಧೀಕ್ಷಕ
   ಕೆ.ಬಿ.ಡಿ. ಪ್ರೈ ಲಿ., ಘಟಕ-1 9ನೇ ಮೈಲಿ, ತುಮಕೂರು ರಸ್ತೆ, ಬೆಂಗಳೂರು.
4. ಶ್ರೀ ಎಂ. ಜಯರಾಮ ನಾಯಕ್, ಅಬಕಾರಿ ಅಧೀಕ್ಷಕ
   ಕೆ.ಬಿ.ಡಿ. ಪ್ರೈ ಲಿ., ಘಟಕ-2, 20ನೇ ಮೈಲಿ, ತುಮಕೂರು ರಸ್ತೆ, ಬೆಂಗಳೂರು.
5. ಶ್ರೀ ಟಿ. ಜಯರಾಮ್, ಅಬಕಾರಿ ಅಧೀಕ್ಷಕ
   ನ್ಯಾಷನಲ್ ಡಿಸ್ಟಿಲರೀಸ್ ಮತ್ತು ಅಲೈಡ್ ಪ್ರಾಡಕ್ಟ್ ಮೈಸೂರು ರಸ್ತೆ, ಬೆಂಗಳೂರು.

ಆದಕಾರಣ ಇವರುಗಳ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳುವುದನ್ನು ಬಾಕಿ ಇರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಇವರುಗಳನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ ಸರ್ಕಾರವು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ. ಆಇ 136 ಇಪಿಎಸ್ 2003, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಅಧಿಕಾರಿಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10 (1) (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿಸ್ತು ಕ್ರಮದ ವಿಚಾರಣೆ ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

1. ಶ್ರೀ ಸಿ.ಎಫ್. ಹಾದಿಮನಿ, ಅಬಕಾರಿ ಅಧೀಕ್ಷಕ (ಪ್ರಭಾರ)
   ಪಂಪಸಾರ ಡಿಸ್ಟಿಲರಿ, ಹೊಸಪೇಟೆ, ಬಳ್ಳಾರಿ ಜಿಲ್ಲೆ.
2. ಶ್ರೀ ಪಿ.ಆರ್. ವೇಣುಗೋಪಾಲ ರೆಡ್ಡಿ ಅಬಕಾರಿ ಅಧೀಕ್ಷಕ
   ಜೆ.ಪಿ. ಡಿಸ್ಟಿಲರಿ ಪ್ರೈ ಲಿ., ದಾಸನಪುರ ತುಮಕೂರು ರಸ್ತೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
3. ಶ್ರೀ ಬಿ.ಸಿ. ಮಲ್ಲಾರಾಧ್ಯ ಅಬಕಾರಿ ಅಧೀಕ್ಷಕ
   ಕೆ.ಬಿ.ಡಿ. ಪ್ರೈ ಲಿ., ಘಟಕ-1 9ನೇ ಮೈಲಿ, ತುಮಕೂರು ರಸ್ತೆ, ಬೆಂಗಳೂರು.
4. ಶ್ರೀ ಎಂ. ಜಯರಾಮ ನಾಯಕ್, ಅಬಕಾರಿ ಅಧೀಕ್ಷಕ
   ಕೆ.ಬಿ.ಡಿ. ಪ್ರೈ ಲಿ., ಘಟಕ-2, 20ನೇ ಮೈಲಿ, ತುಮಕೂರು ರಸ್ತೆ, ಬೆಂಗಳೂರು.
5. ಶ್ರೀ ಟಿ. ಜಯರಾಮ್, ಅಬಕಾರಿ ಅಧೀಕ್ಷಕ
   ನ್ಯಾಷನಲ್ ಡಿಸ್ಟಿಲರೀಸ್ ಮತ್ತು ಅಲೈಡ್ ಪ್ರಾಡಕ್ಟ್ ಮೈಸೂರು ರಸ್ತೆ, ಬೆಂಗಳೂರು.

ಈ ಅಧಿಕಾರಿಗಳು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ. ಇವರುಗಳು ನಿಯಮಾನುಸಾರ ಜೀವನ ನಿರ್ವಹಣೆ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಈ ಮೇಲ್ಕಂಡ ಅಧಿಕಾರಿಗಳು ಅಮಾನತ್ತುಗೊಂಡ ಕಾರಣ ತೆರವಾಗುವ ಹುದ್ದೆಗಳ ಹೆಚ್ಚುವರಿ ಪ್ರಭಾರವನ್ನು ಸಂಬಂಧಪಟ್ಟ ಜಿಲ್ಲೆಗಳ ಅಬಕಾರಿ ಅಧೀಕ್ಷಕರುಗಳು ವಹಿಸಿಕೊಳ್ಳತಕ್ಕದ್ದು. ಪ್ರಭಾರ ವಹಿಸಿಕೊಂಡ ಅಬಕಾರಿ ಅಧೀಕ್ಷಕರು ಸಂಬಂಧಪಟ್ಟ ಡಿಸ್ಟಿಲರಿಗಳ ಮೇಲ್ವಿಚಾರಣಾ ಕಾರ್ಯವನ್ನು ಕಟ್ಟುನಿಟ್ಟಾಗಿ ನಿರ್ವಹಿಸತಕ್ಕದೆಂದು ಈ ಮೂಲಕ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1119 **ಎಲ್. ಶ್ರೀನಿವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಅಬಕಾರಿ)

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ವಿಷಯ:** ಶ್ರೀ ಕೆ.ಆರ್. ಚಾಮಯ್ಯ, ಸದಸ್ಯರು, ಕರ್ನಾಟಕ ಅಧಿನಿಯಮಗಳ ಸಂಪುಟವನ್ನು ಸಿದ್ಧಪಡಿಸುವ ಸಮಿತಿ, ಇವರಿಗೆ ರಜೆ ನಗದೀಕರಣ ಸೌಲಭ್ಯವನ್ನು ಪಾವತಿ ಮಾಡುವಲ್ಲಿ ವಿಳಂಬವಾಗಿರುವ ಬಗ್ಗೆ ಬಡ್ಡಿಯನ್ನು ನೀಡುವ ಕುರಿತು.

**ಓದಲಾಗಿದೆ:**
(1) ಸರ್ಕಾರದ ಆದೇಶ ಸಂಖ್ಯೆ:ಡಿಪಿಎಎಲ್ 41 ಆಡಳಿತ 96,ದಿ:7.8.96.
(2) ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 48 ಆಡಳಿತ 96,ದಿ:11.9.96.
(3) ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 67 ಆಡಳಿತ 2000,ದಿ:21.7.2000.
ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 129 ಆಡಳಿತ 2000,ದಿ:8.9.2000
ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 51 ಆಡಳಿತ 2001,ದಿ:29.3.2001
(4) ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 131 ಆಡಳಿತ 2000,ದಿನಾಂಕ: 31.1.2001.
(5) Government Pleader, KAT, Indiranagar ಇವರ ಪತ್ರ ಸಂಖ್ಯೆ: 12960/02-03, ದಿನಾಂಕ:4.1.2003.
(6) ಕಾನೂನು ಇಲಾಖೆಯ ಕಡತ ಸಂಖ್ಯೆ:ಲಾ 121 ಎಲ್ ಎಸ್ ಪಿ 2000 ದಲ್ಲಿ ಕಂಡಿಕೆ 35ರಲ್ಲಿರುವ ಟಿಪ್ಪಣಿ.
(7) ಟಿಪ್ಪಣಿ ಸಂಖ್ಯೆ: ಸಿಆಸುಇ 1661 ಲೆಪ-ಐಆರ್ ಎಲ್ ಎ 2003, ದಿನಾಂಕ:31.5.2003,ಅದೇ ಕ್ರಮಾಂಕದ ಟಿಪ್ಪಣಿ ದಿನಾಂಕ: 19.8.2003 ಹಾಗೂ ಟಿಪ್ಪಣಿ ಸಂಖ್ಯೆ:ಸಿಆಸುಇ 2696 ಲೇಪ (ಐ ಆರ್ ಎಲ್ ಎ) 2003, ದಿನಾಂಕ:22/27.8.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಧಿನಿಯಮಗಳ ಕ್ರೋಢೀಕೃತ ಸಂಪುಟಗಳನ್ನು ಸಿದ್ಧಪಡಿಸಲು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ನಿವೃತ್ತ ಉಪಾಧ್ಯಕ್ಷರಾದ ಶ್ರೀ ಕೆ.ಆರ್.ಚಾಮಯ್ಯ ಇವರನ್ನೊಳಗೊಂಡಂತೆ ಏಕ ಸದಸ್ಯ ಸಮಿತಿಯನ್ನು ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಅದೇಶದಲ್ಲಿ ಶ್ರೀ ಕೆ.ಆರ್.ಚಾಮಯ್ಯ, ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (3)ರಲ್ಲಿ ಓದಲಾಗಿರುವ ಅಧಿಸೂಚನೆಗಳಲ್ಲಿ ಅನುಕ್ರಮವಾಗಿ 1997-98; 1999-2000, 2001-2002ನೇ ಬ್ಲಾಕ್ ಅವಧಿಗೆ ಶ್ರೀ ಕೆ.ಆರ್.ಚಾಮಯ್ಯ ಇವರ ಹಕ್ಕಿನಲ್ಲಿರುವ 30 ದಿನಗಳ ಗಳಿಕೆ ರಜೆಯನ್ನು ನಗದೀಕರಿಸಲು ಮಂಜೂರಾತಿ ನೀಡಲಾಗಿದೆ. ಹಾಗೂ ಸದರಿ ರಜೆ ನಗದೀಕರಣದ ಮೊತ್ತ ರೂ.1,29,080/-ನ್ನು ಚೆಕ್ ಸಂಖ್ಯೆ:846593 ಸಿಡಿವಿ ನಂ.352 ದಿನಾಂಕ:6.8.2002ರ ಮೂಲಕ ಶ್ರೀ ಕೆ.ಆರ್.ಚಾಮಯ್ಯ, ಇವರಿಗೆ ಪಾವತಿಸಲಾಗಿದೆ.

ಮಹಾಲೇಖಪಾಲರು ತಮ್ಮ ಪತ್ರ ಸಂಖ್ಯೆ:GE XI/CCV/1/22/2000-01/793, ದಿನಾಂಕ: 1.3.2001 ಹಾಗೂ ಪತ್ರ ಸಂಖ್ಯೆ: GEXI/F/OCVI/2001-02/293-94, ದಿನಾಂಕ: 17.7.2001ರಲ್ಲಿ ರಜೆ ನಗದೀಕರಣ ಸೌಲಭ್ಯದ ಬಗ್ಗೆ ಇವರು ಷರತ್ತುಗಳನ್ನು ಮಾರ್ಪಾಡಿಸುವಂತೆ ತಿಳಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾಗಿರುವ ಪತ್ರದಲ್ಲಿ ಶ್ರೀ ಕೆ.ಆರ್.ಚಾಮಯ್ಯ ರವರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳನ್ನು ತಿದ್ದುಪಡಿ ಮಾಡಲಾಗಿದೆ.

ಮೇಲೆ (5)ರಲ್ಲಿ ಓದಲಾಗಿರುವ ಪತ್ರದಲ್ಲಿ Government Pleader ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಶ್ರೀ ಕೆ.ಆರ್.ಚಾಮಯ್ಯ ಇವರು ದಾಖಲು ಮಾಡಿರುವ ಅರ್ಜಿ ಸಂಖ್ಯೆ:10626 ಆಫ್ 2001 ಇದರ ತೀರ್ಪಿನ ನಕಲು ಹಾಗೂ ತಮ್ಮ ಅಭಿಪ್ರಾಯವನ್ನು ಕಳುಹಿಸಿ ಸದರಿ ಅರ್ಜಿಯ ಮೇಲೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವ ತೀರ್ಪಿನ ಬಗ್ಗೆ ಮೇಲ್ಮನವಿ ಸಲ್ಲಿಸಲು ಇದು ಸೂಕ್ತ ಪ್ರಕರಣವಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಮೇಲೆ (6)ರಲ್ಲಿ ಓದಲಾಗಿರುವ ಟಿಪ್ಪಣಿಯಲ್ಲಿ ಕಾನೂನು ಇಲಾಖೆಯು ಈ ಅಭಿಪ್ರಾಯವನ್ನು ಸಮರ್ಥಿಸಿದೆ. ಶ್ರೀ ಕೆ.ಆರ್.ಚಾಮಯ್ಯ ಇವರ ರಜೆ ನಗದೀಕರಣದ ಮೊಬಲಗು ಪಾವತಿಸುವಲ್ಲಿ ಆಗಿರುವ ವಿಳಂಬದ ಬಗ್ಗೆ ಶೇಕಡ 12ರಷ್ಟು ಬಡ್ಡಿಯನ್ನು ನೀಡುವ ಬಗ್ಗೆ ಪರಿಶೀಲಿಸಲಾಯಿತು. ಹಾಗೂ ಇದೇ ಕ್ರಮಾಂಕದ ದಿನಾಂಕ:6.5.2003ರ ಆದೇಶವನ್ನು ಹೊರಡಿಸಲಾಯಿತು.

ಮೇಲೆ (7)ರಲ್ಲಿ ಓದಲಾಗಿರುವ ಟಿಪ್ಪಣಿಗಳಲ್ಲಿ ಆದೇಶವು ಸ್ಪಷ್ಟವಾಗಿರುವುದಿಲ್ಲವೆಂದು ಹಾಗೂ ಸದರಿ ಆದೇಶದ ಮೇಲೆ ತೆಗೆದುಕೊಳ್ಳುವ ಕ್ರಮವು ಆಕ್ಷೇಪಾರ್ಹವಾಗುತ್ತದೆ. ಈ ಹಿನ್ನೆಲೆಯಲ್ಲಿ ಪರಿಷ್ಕೃತ ಸರ್ಕಾರಿ ಆದೇಶವನ್ನು ಹೊರಡಿಸಿ ಸಿ.ಆ.ಸು.ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ) ಶಾಖೆಯನ್ನು ಸಂಪರ್ಕಿಸಲು ಸೂಚಿಸಲಾಗಿದೆ. ಆದ್ದರಿಂದ ಇದೇ ಕ್ರಮಾಂಕದ ದಿನಾಂಕ:6.5.2003ರ ಸರ್ಕಾರದ ಆದೇಶವನ್ನು ಹಿಂದಕ್ಕೆ ಪಡೆದು ಈ ಕೆಳಕಂಡಂತೆ ಪರಿಷ್ಕೃತ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 131 ಆಡಳಿತ 2001, ಬೆಂಗಳೂರು, ದಿನಾಂಕ:28ನೇ ಆಗಸ್ಟ್ 2003**
**(Unique Code No.DPAL 7 of 2003)**

ಶ್ರೀ ಕೆ.ಆರ್.ಚಾಮಯ್ಯ, ನಿವೃತ್ತ ಉಪಾಧ್ಯಕ್ಷರು, ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಹಾಗೂ ಸದಸ್ಯರು, ಕರ್ನಾಟಕ ಅಧಿನಿಯಮಗಳ ಕ್ರೋಢೀಕೃತ ಸಂಪುಟಗಳನ್ನು ಸಿದ್ಧಪಡಿಸುವ ಸಮಿತಿ ಇವರಿಗೆ,-

(1) ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 67 ಆಡಳಿತ 2000,ದಿ:21.7.2000ರಲ್ಲಿ 1997-98,

(2) ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 129 ಆಡಳಿತ 2000,ದಿ:8.9.2000ರಲ್ಲಿ 1999-2000,

(3) ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 51 ಆಡಳಿತ 2001,ದಿ:29.3.2001ರಲ್ಲಿ 2001-2002ನೇ ಸಾಲಿಗೆ

ರಜೆ ನಗದೀಕರಣ ಮಂಜೂರು ಮಾಡಲಾಗಿದೆ ಹಾಗೂ ರಜೆ ನಗದೀಕರಣದ ಮೊಬಲಗು ರೂ.1,29,080-00ನ್ನು ಚೆಕ್ ಸಂಖ್ಯೆ:846593 CDV No.352,ದಿನಾಂಕ:6.8.2002ರಲ್ಲಿ ಪಾವತಿ ಮಾಡಲಾಗಿದೆ.

ಮೇಲಿನ ಅಧಿಸೂಚನೆಗಳಲ್ಲಿ ನಗದೀಕರಣ ಸೌಲಭ್ಯವನ್ನು ಮಂಜೂರು ಮಾಡಿದ ನಂತರ ಸದರಿ ಮೊಬಲಗನ್ನು ದಿನಾಂಕ:6.8.2002ರಲ್ಲಿ ವಿಳಂಬವಾಗಿ ಡ್ರಾ ಮಾಡಿರುವ ಅವಧಿಗೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ರಿಟ್ ಅರ್ಜಿ ಸಂಖ್ಯೆ: 10626 ಆಫ್ 2001ರಲ್ಲಿ ದಿನಾಂಕ:21.11.2002ರಂದು ನೀಡಿರುವ ತೀರ್ಪಿನ ಅನ್ವಯ ಶೇಕಡ 12ರ ಬಡ್ಡಿ ದರದಲ್ಲಿ ಒಟ್ಟು ರೂ.27,187-00 (ಇಪ್ಪತ್ತೇಳು ಸಾವಿರದ ನೂರ ಎಂಭತ್ತೇಳು ರೂಪಾಯಿಗಳು ಮಾತ್ರ) ಬಡ್ಡಿಯನ್ನು ಪಾವತಿಸಲು ಮಂಜೂರಾತಿ ನೀಡಿದೆ.

ಇದನ್ನು ಲೆಕ್ಕಶೀರ್ಷಿಕೆ 2052-00-090-0-02 ಸಮಿತಿ, ಸಮ್ಮೇಳನ ಮತ್ತು ನ್ಯಾಯಾಧೀಕರಣ ಮುಂತಾದವುಗಳಿಗೆ ಸಂಬಂಧಪಟ್ಟ ವೆಚ್ಚದ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:FD 757 Exp.7/2003,ದಿನಾಂಕ:1.8.2003ರಲ್ಲಿ "Finance Department agrees to the proposal as an exception to the policy and also on the basis of Law Departments opinion that the interest granted by the Court is by way of damages" ಎಂದು ಅನುಮೋದನೆ ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಿಚಾರ್ಡ್ ಲೋಬೊ**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 1120

## ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವಾಲಯ

**ವಿಷಯ:** ಕರ್ನಾಟಕ ಜೈವಿಕ ತಂತ್ರಜ್ಞಾನ ಅಭಿವೃದ್ಧಿ ಪರಿಷತ್ತಿಗೆ ಸ್ವಾಯತ್ತ ಸಂಸ್ಥೆಯ ಸ್ಥಾನಮಾನ ನೀಡಿ ಅದನ್ನು ಕರ್ನಾಟಕ ಸೊಸೈಟೀಸ್ ಆಕ್ಟ್-1960ರ ಅಡಿಯಲ್ಲಿ ನೊಂದಾಯಿಸುವುದು -ಪರಿಷತ್ತಿಗೆ ಧಾರವಾಡದ ಕೃಷಿ ವಿಶ್ವವಿದ್ಯಾಲಯ ಇವರಿಂದ ಇಬ್ಬರನ್ನು ನಾಮ ನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರಕಾರದ ಆದೇಶ ಸಂಖ್ಯೆ: ಐಟಿಡಿ 2 ನೀಸಂವಿ 2003 ದಿನಾಂಕ 05.08.2003.
2. ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಅನಧಿಕೃತ ಟಿಪ್ಪಣಿ ಕ್ರಮಾಂಕ ಕೃತೋಇ 1737 ಕೃಷಿ-ಬಿ 2003 ದಿನಾಂಕ 21.08.2003.

**ಪ್ರಸ್ತಾವನೆ:**

ಕರ್ನಾಟಕ ಜೈವಿಕ ತಂತ್ರಜ್ಞಾನ ಅಭಿವೃದ್ಧಿ ಪರಿಷತ್ತು ಹೊಸದಾಗಿರುವ ಜೈವಿಕ ತಂತ್ರಜ್ಞಾನ ಕ್ಷೇತ್ರದಲ್ಲಿ ತನ್ನ ಜವಾಬ್ದಾರಿಗಳನ್ನು ಹೆಚ್ಚು ಪರಿಣಾಮಕಾರಿಯಾಗಿ ನಿರ್ವಹಿಸಲು ಇದನ್ನು ತನ್ನದೇ ಆದ ಮೆಮೊರಾಂಡಂ ಆಫ್ ಅಸೋಸಿಯೇಷನ್ ಹಾಗೂ ನಿಯಮಗಳೊಂದಿಗೆ ಸ್ವಾಯತ್ತ ಸಂಸ್ಥೆಯಾನ್ನಾಗಿ ಕರ್ನಾಟಕ ಸೊಸೈಟೀಸ್ ಆಕ್ಟ್ 1960ರ ಅಡಿಯಲ್ಲಿ ನೊಂದಾಯಿಸಲು ಸದರಿ ಪರಿಷತ್ತಿಗೆ ಧಾರವಾಡ ಕೃಷಿ ವಿಶ್ವವಿದ್ಯಾಲಯ, ಇವರಿಂದ ಇಬ್ಬರನ್ನು ನಾಮ ನಿರ್ದೇಶನ ಮಾಡಬೇಕೆಂಬ ಪರಿಷತ್ತಿಗೊಳಪಟ್ಟು, ಮೇಲೆ ಕ್ರಮಾಂಕ (1)ರಲ್ಲಿ ಓದಲಾಗಿರುವ ಸರಕಾರಿ ಆದೇಶದಲ್ಲಿ ಸರಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶದ ಹಿನ್ನೆಲೆಯಲ್ಲಿ ಕೃಷಿ ಮತ್ತು ತೋಟಗಾರಿಕೆ ಇಲಾಖೆಯು ಕ್ರಮಾಂಕ (2)ರಲ್ಲಿ ಓದಲಾಗಿರುವ ತಮ್ಮ ಅನಧಿಕೃತ ಟಿಪ್ಪಣಿಯಲ್ಲಿ ಧಾರವಾಡ ವಿಶ್ವವಿದ್ಯಾಲಯದ ಈ ಕೆಳಕಾಣಿಸಿದವರನ್ನು ಕರ್ನಾಟಕ ಜೈವಿಕ ತಂತ್ರಜ್ಞಾನ ಅಭಿವೃದ್ಧಿ ಪರಿಷತ್ತಿಗೆ ಸದಸ್ಯರಾಗಿ ನಾಮನಿರ್ದೇಶನ ಮಾಡಲು ಸೂಚಿಸಿದೆ.

01) ಡಾ. ಎಸ್.ಎ. ಪಾಟೀಲ್,
ಕುಲಪತಿಗಳು ಕೃಷಿ ವಿಶ್ವವಿದ್ಯಾಲಯ ಧಾರವಾಡ.

02) ಡಾ. ಕುರುವಿನ ಶೆಟ್ಟಿ,
ಪ್ರೊಫೆಸರ್ ಅಂಡ್ ಹೆಡ್ ಆಫ್ ದಿ ಡಿಪಾರ್ಟ್‌ಮೆಂಟ್ 'ಬಯೋಟೆಕ್ನಾಲಜಿ' ಕೃಷಿ ವಿಶ್ವವಿದ್ಯಾನಿಲಯ ಧಾರವಾಡ.

ಸದರಿ ಪ್ರಸ್ತಾವನೆಯನ್ನು ಸರಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಕ್ರಮಾಂಕ: ಮಾತಂಇ 02 ನೀಸಂವಿ 2003, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರಕಾರವು ಕರ್ನಾಟಕ ಜೈವಿಕ ತಂತ್ರಜ್ಞಾನ ಅಭಿವೃದ್ಧಿ ಪರಿಷತ್ತಿಗೆ ಈ ಕೆಳಕಾಣಿಸಿದ ಇಬ್ಬರು ಸದಸ್ಯರನ್ನು ನಾಮ ನಿರ್ದೇಶನ ಮಾಡಿ ತಕ್ಷಣದಿಂದ ಜಾರಿಗೆ ಬರುವಂತೆ ಆದೇಶ ಹೊರಡಿಸಿದೆ.

01) ಡಾ. ಎಸ್.ಎ. ಪಾಟೀಲ್,
ಕುಲಪತಿಗಳು ಕೃಷಿ ವಿಶ್ವವಿದ್ಯಾಲಯ ಧಾರವಾಡ.

02) ಡಾ. ಕುರುವಿನ ಶೆಟ್ಟಿ,
ಪ್ರೊಫೆಸರ್ ಅಂಡ್ ಹೆಡ್ ಆಫ್ ದಿ ಡಿಪಾರ್ಟ್‌ಮೆಂಟ್ 'ಬಯೋಟೆಕ್ನಾಲಜಿ' ಕೃಷಿ ವಿಶ್ವವಿದ್ಯಾನಿಲಯ ಧಾರವಾಡ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಂ. ಆನಂದ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ.

ಪಿ.ಆರ್. 1121

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ವಿ. ಶಂಕರ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ಜಾತಿಯ ಪರಿಶೀಲನೆ - ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಹೆಚ್ಚುವರಿ ಪೊಲೀಸು ಮಹಾನಿರ್ದೇಶಕರು, ನಾಗರೀಕ ಹಕ್ಕು ಜಾರಿದಳ, ಬೆಂಗಳೂರು ಅವರ ಪತ್ರದ ಕ್ರಮಾಂಕ:ಜಾವಿ:50:ಬಿಸಿ:ನಾಹಜಾನಿ:96 ದಿನಾಂಕ:20-8-2002.
2. ಸರ್ಕಾರದ ಸಮಾಜ ಕಲ್ಯಾಣ ಇಲಾಖೆಯ ಪತ್ರ ಸಂಖ್ಯೆ:ಸಕಇ 61 ಎಸ್‌ಎಡಿ 2003 ದಿನಾಂಕ: 23-04-2003.
3. ಜಿಲ್ಲಾಧಿಕಾರಿಗಳ ಹಾಗೂ ಅಧ್ಯಕ್ಷರು, ಜಿಲ್ಲಾ ಜಾತಿ ಪರಿಶೀಲನಾ ಸಮಿತಿ ಬೆಂಗಳೂರು ನಗರಜಿಲ್ಲೆ ಅವರ ಆದೇಶ ಕ್ರಮಾಂಕ:ಜಿಸಕಅ(ನ):ಸಿಂಧುತ್ವ:ಸಿಆರ್-163:02-03 ದಿನಾಂಕ: 28-6-2003.

**ಪ್ರಸ್ತಾವನೆ:**

ಶ್ರೀ ವಿ. ಶಂಕರ್ ಬಿನ್ ಆರ್. ವೆಂಕಟರಾಮಯ್ಯ ಕೆಎಎಸ್ ಅಧಿಕಾರಿ ಇವರು ಪರಿಶಿಷ್ಟ ವರ್ಗದ ಕಾಡು ಕುರುಬ ಜಾತಿಗೆ ಸೇರಿದವರೆಂದು ಜಾತಿ ಪ್ರಮಾಣ ಪತ್ರವನ್ನು ಬೆಂಗಳೂರು ದಕ್ಷಿಣ ತಾಲ್ಲೂಕು ತಹಶೀಲ್ದಾರ್ ಅವರಿಂದ ಪಡೆದು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 252 ಅಸೇವೆ 95 ದಿನಾಂಕ: 13-10-95 ರಂತೆ ಕೆಎಎಸ್ (ಕಿರಿಯ ಶ್ರೇಣಿ) ಹುದ್ದೆಗೆ ನೇಮಕಗೊಂಡಿದ್ದನ್ನು ಪ್ರಶ್ನಿಸಿ ಶ್ರೀ ಎನ್. ಬಾಬಣ್ಣ ಎಂಬುವವರು ಸರ್ಕಾರಕ್ಕೆ ದೂರು ಅರ್ಜಿ ಸಲ್ಲಿಸಿದ್ದ ಹಿನ್ನೆಲೆಯಲ್ಲಿ ಪ್ರಕರಣ ಕುರಿತು ನಾಗರೀಕ ಹಕ್ಕು ಜಾರಿ

ನಿರ್ದೇಶನಾಲಯವು ತನಿಖೆ ನಡೆಸಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 20-8-2002ರ ತನ್ನ ಪತ್ರದಲ್ಲಿ ತನಿಖಾವರದಿಯನ್ನು ಸಕ್ಷಮ ಪ್ರಾಧಿಕಾರಿಯಾದ ಬೆಂಗಳೂರು ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿತು. ಅನಂತರ ಸಮಾಜ ಕಲ್ಯಾಣ ಇಲಾಖೆಯು ಮೇಲೆ (2)ರಲ್ಲಿ ಓದಲಾದ ದಿನಾಂಕ: 23-4-2003ರ ಪತ್ರದಲ್ಲಿ ಶ್ರೀ ವಿ. ಶಂಕರ್ ಅವರ ತಂದೆಯವರಾದ ಶ್ರೀ ಆರ್. ವೆಂಕಟರಾಮಯ್ಯನವರು ನಿವೃತ್ತ ಸರ್ಕಾರಿ ನೌಕರರಾಗಿದ್ದು ಅವರ ಸೇವಾ ಪುಸ್ತಕದಲ್ಲಿ ಇರುವ ಕಾಡುಕುರುಬ ಜಾತಿಗೆ ಸೇರಿದವರೆಂದು ದೃಢೀಕರಣವಿರುತ್ತದೆ. ಈ ಅಂಶವನ್ನು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಶ್ರೀ ವಿ. ಶಂಕರ್ ಅವರ ಸ್ವಂತ ತಮ್ಮ ಶ್ರೀ ವಿ. ರವಿ ಅವರು ಸಿಆರ್‌ಇ ಸೆಲ್‌ನ ವಿಚಾರಣೆಯ ವಿರುದ್ಧ ಸಲ್ಲಿಸಿರುವ ಅರ್ಜಿ ಸಂಖ್ಯೆ: 18:92ರ ಮೇಲೆ ದಿನಾಂಕ: 13-3-92ರ ತಮ್ಮ ತೀರ್ಪಿನಲ್ಲಿ ಉಲ್ಲೇಖಿಸಿರುತ್ತದೆ. ಆದಾಗ್ಯೂ ಸದರಿ ತೀರ್ಪಿನಲ್ಲಿನ ನಿರ್ದೇಶನದ ಅನ್ವಯ ಕರ್ನಾಟಕ ಸರ್ಕಾರವು ಶ್ರೀ ವಿ. ರವಿ ಅವರ ಪ್ರಕರಣದಲ್ಲಿ ಸಕ್ಷಮ ಪ್ರಾಧಿಕಾರಿಯಿಂದ ಮರು ವಿಚಾರಣೆ ನಡೆಸಿ ಶ್ರೀ ವಿ. ರವಿಯವರು ಕಾಡುಕುರುಬ ಜನಾಂಗಕ್ಕೆ ಸೇರಿದವರೆಂದು ಸಾಬೀತಾಗಿರುತ್ತದೆ. ಅದರಂತೆ ಅವರಿಗೆ ಸರ್ಕಾರವು ನೇಮಕಾತಿ ಆದೇಶವನ್ನು ನೀಡಿರುತ್ತದೆ. ಆದ್ದರಿಂದ ಈ ಪ್ರಕರಣದಲ್ಲಿ ಶ್ರೀ ವಿ. ಶಂಕರ್ ಅವರ ಕುಟುಂಬದ ಸದಸ್ಯರೇ ಆದ ಅವರ ಸಹೋದರ ಶ್ರೀ ವಿ. ರವಿ ಅವರ ಬಗ್ಗೆ ವಿಚಾರಣೆಗಾಗಿ ಸಕ್ಷಮ ಪ್ರಾಧಿಕಾರಿಯಿಂದ ಅವರು ಕಾಡುಕುರುಬ ಜನಾಂಗಕ್ಕೆ ಸೇರಿದವರೆಂದು ಸಾಬೀತಾಗಿರುತ್ತದೆ. ಶ್ರೀ ವಿ. ಶಂಕರ್ ಅವರ ಪ್ರಕರಣದಲ್ಲಿಯೂ ಸಹ ಸಕ್ಷಮ ಪ್ರಾಧಿಕಾರಿಯು ದೃಢೀಕರಣ ಮಾಡಿರುವುದರಿಂದ ಅವರ ಜಾತಿ ಕಾಡುಕುರುಬ ಎಂದು ಸರ್ಕಾರ ಸ್ಥಿರೀಕರಿಸಿ ಮುಂದಿನ ತನಿಖೆ ಅವಶ್ಯವಿಲ್ಲವೆಂದು ಸಿಆರ್‌ಇ ಸೆಲ್‌ಗೆ ನಿರ್ದೇಶನ ನೀಡಿರುತ್ತದೆ.

ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶನದನ್ವಯ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಮತ್ತು ಅಧ್ಯಕ್ಷರು, ಜಿಲ್ಲಾ ಜಾತಿ ಪರಿಶೀಲನಾ ಸಮಿತಿ ಅವರು ಮೇಲೆ (3) ರಲ್ಲಿ ಓದಲಾದ ದಿನಾಂಕ: 28-6-2003ರ ಆದೇಶದಲ್ಲಿ ಶ್ರೀ ವಿ. ಶಂಕರ್ ಅವರು ಕಾಡುಕುರುಬ ಜಾತಿಗೆ ಸೇರಿರುವುದು ಸ್ಥಿರೀಕರಿಸಲ್ಪಟ್ಟಿರುವುದರಿಂದ ಮುಂದಿನ ತನಿಖೆ ಅವಶ್ಯವಿಲ್ಲವೆಂದು ವಿಚಾರಣೆಯನ್ನು ಕೈಬಿಟ್ಟು ಆದೇಶವನ್ನು ಹೊರಡಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಮಾಜ ಕಲ್ಯಾಣ ಇಲಾಖೆ ಹಾಗೂ ಜಿಲ್ಲಾಧಿಕಾರಿಯವರ ಆದೇಶಗಳನ್ನು ಪರಿಶೀಲಿಸಿ ಅವುಗಳನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ವಿ. ಶಂಕರ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅವರು ಕಾಡುಕುರುಬ ಜಾತಿಗೆ ಸೇರಿದವರೆಂದು ಸ್ಥಿರೀಕರಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1122

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಬಿ. ರಾಜಣ್ಣ, ಕೆಎಎಸ್ (ಕಿ.ಶ್ರೇ) ಅಧಿಕಾರಿ, ಶ್ರೀ ಗೋಪಾಲ್, ಪರಿಷತ್ ಕಾರ್ಯದರ್ಶಿ, ಶ್ರೀ ಹೆಚ್.ಬಿ. ಶಂಕರಪ್ಪ, ಕಿರಿಯ ಇಂಜಿನಿಯರ್ ಶ್ರೀ ಪಿ.ಜಿ. ಶ್ರೀಹರಿ, ಕಿರಿಯ ಇಂಜಿನಿಯರ್ ರವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 03 ಎಸ್‌ಇಎನ್ 99, ದಿ:7-11-2001.
2. ನೋಟೀಸ್ ಸಂಖ್ಯೆ:ಗ್ರಾಅವ 89 ವಿಸೇಬಿ 98, ದಿ:3-7-2001.
3. ಶ್ರೀ ಬಿ. ರಾಜಣ್ಣ, ಶ್ರೀ ಗೋಪಾಲ್, ಶ್ರೀ ಹೆಚ್.ಬಿ. ಶಂಕರಪ್ಪ ಮತ್ತು ಶ್ರೀ ಪಿ.ಜಿ. ಶ್ರೀಹರಿ ರವರುಗಳು ಕ್ರಮವಾಗಿ ನೋಟೀಸಿಗೆ ಸಲ್ಲಿಸಿದ ದಿನಾಂಕ:5-1-2002, 1-8-2001, 20-12-2001 ಮತ್ತು 20-12-2001 ರ ಉತ್ತರ.

**ಪ್ರಸ್ತಾವನೆ:**

ಶ್ರೀ ಬಿ. ರಾಜಣ್ಣ, ಕೆಎಎಸ್ (ಕಿ.ಶ್ರೇ) ಅಧಿಕಾರಿ ಅವರು ಕಾರ್ಯನಿರ್ವಾಹಣಾಧಿಕಾರಿ ಹುದ್ದೆಯಲ್ಲಿ, ಶ್ರೀ ಗೋಪಾಲ್, ಪರಿಷತ್ ಕಾರ್ಯದರ್ಶಿ ಅವರು ಪ್ರಭಾರ ಕಾರ್ಯನಿರ್ವಾಹಕ ಹುದ್ದೆಯಲ್ಲಿ, ಶ್ರೀ ಹೆಚ್.ಬಿ. ಶಂಕರಪ್ಪ, ಕಿರಿಯ ಇಂಜಿನಿಯರ್ ಮತ್ತು ಶ್ರೀ ಪಿ.ಜಿ. ಶ್ರೀಹರಿ, ಕಿರಿಯ ಇಂಜಿನಿಯರ್ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕು ಪಂಚಾಯತಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಚಳ್ಳಕೆರೆ ತಾಲ್ಲೂಕು ಪಂಚಾಯತ್ ವ್ಯಾಪ್ತಿಯಲ್ಲಿ ಬರುವ ಕೆಲವು ಹಳ್ಳಿಗಳ ಫಲಾನುಭವಿಗಳಿಗೆ 1995-96ನೇ ಸಾಲಿನ ನಿರ್ಮಲ ಕರ್ನಾಟಕ ಯೋಜನೆ ಅಡಿಯಲ್ಲಿ ಕೈಗೆತ್ತಿಗೊಳ್ಳಲಾಗಿದ್ದ ಶೌಚಾಲಯ ಕಾಮಗಾರಿ ಸಂಬಂಧ ಶೌಚಾಲಯಗಳನ್ನು ಕಟ್ಟದೆ ಇದ್ದರೂ ಶೌಚಾಲಯಗಳನ್ನು ಕಟ್ಟಿದೆ ಎಂದು ಹಣ ಪಾವತಿ ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ರನ್ವಯ ಶ್ರೀ ಬಿ. ರಾಜಣ್ಣ, ಹೆಚ್.ಬಿ. ಶಂಕರಪ್ಪ ಮತ್ತು ಶ್ರೀ ಪಿ.ಜಿ. ಶ್ರೀಹರಿ ಅವರುಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 7-11-2001ರ ನೋಟೀಸನ್ನು ಹಾಗೂ ಶ್ರೀ ಗೋಪಾಲ್ ರವರಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 3-7-2001ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿಯನ್ನು ಕೇಳುವುದರ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಶ್ರೀ ಬಿ. ರಾಜಣ್ಣ, ಕೆಎಎಸ್ (ಕಿ.ಶ್ರೇ) ಅಧಿಕಾರಿ ಅವರು ದಿನಾಂಕ:5-1-2002ರ ಉತ್ತರ ಸಲ್ಲಿಸಿ ಶೌಚಾಲಯಗಳಿಗೆ ಇಲಾಖೆಯಿಂದ ಕೇವಲ ಪರಿಹಾರ ಧನ ವಿತರಿಸಲಾಗುತ್ತಿತ್ತು. ಉಳಿಕೆ ಹಣವನ್ನು ಫಲಾನುಭವಿಗಳೇ ಭರಿಸಬೇಕಾಗಿತ್ತು. ಶೌಚಾಲಯದ ಸಾಮಗ್ರಿಗಳನ್ನು ಗ್ರಾಮ ಪಂಚಾಯತಿಗಳು ಒದಗಿಸಿದ ಪಟ್ಟಿಯಂತೆ ಫಲಾನುಭವಿಗಳಿಗೆ ನೀಡಲಾಗಿದೆ. ಶೌಚಾಲಯದ ಕಟ್ಟಡಕ್ಕೆ ಹಣವನ್ನು ಸರ್ಕಾರದಿಂದ ನೀಡಿರುವುದಿಲ್ಲ. ಶೌಚಾಲಯ ನಿರ್ಮಿಸಿರುವುದನ್ನು ಕಿರಿಯ ಇಂಜಿನಿಯರ್ ರವರು ಪ್ರಮಾಣೀಕರಿಸಿದ ಮೇರೆಗೆ ಮತ್ತು

ಖಾತರಿ ಪಡಿಸಿಕೊಂಡೇ ಪರಿಹಾರ ಧನ ಪಾವತಿ ಮಾಡಲಾಗಿದೆ. ಈ ಕುರಿತು ಕೃಷಿ ಇಲಾಖೆಯ ಜಂಟಿ ನಿರ್ದೇಶಕರು ನೀಡಿರುವ ವರದಿಯು ಅಪೂರ್ಣವಾದ ಪಟ್ಟಿಯನ್ನು ಮತ್ತು ಅಂಕಿ ಅಂಶಗಳನ್ನು ಆಧರಿಸಿರುವುದಾಗಿದೆ. ತನಿಖೆ ಮಾಡುವ ಸಮಯಕ್ಕೆ ಶೌಚಾಲಯಗಳ ನಿರ್ಮಾಣ ಮುಗಿದು ಆಗಲೇ ಎರಡು ಮೂರು ವರ್ಷಗಳು ಕಳೆದಿದ್ದು ಫಲಾನುಭವಿಗಳು ಶೌಚಾಲಯಗಳನ್ನು ಸ್ನಾನದ ಮನೆಗಳನ್ನಾಗಿ ಪರಿವರ್ತಿಸಿರುವುದನ್ನು ಗುರುತಿಸಿ ಗಣನೆಗೆ ತೆಗೆದುಕೊಂಡಿರುವುದಿಲ್ಲವೆಂದು ತಿಳಿಸಿರುತ್ತಾರೆ. ಶ್ರೀ ಗೋಪಾಲ್, ಪರಿಷತ್ ಕಾರ್ಯದರ್ಶಿಯವರು ದಿನಾಂಕ:1-8-2001ರ ಉತ್ತರ ಸಲ್ಲಿಸಿ ಜಂಟಿ ನಿರ್ದೇಶಕರ ವರದಿಯು ತಮ್ಮ ಗಮನಕ್ಕೆ ಬಂದಿಲ್ಲವೆಂದು ಶೌಚಾಲಯದ ಮೇಲು ಕಟ್ಟಡದ ಬಾಬಿಗೆ ಸರ್ಕಾರದಿಂದ ಯಾವ ಸಹಾಯ ಧನ ನೀಡಲ್ಪಟ್ಟಿಲ್ಲ. ಶೌಚಾಲಯಗಳು ನಿರ್ಮಾಣವಾಗಿದೆಯೆಂಬುದನ್ನು ತಾಲ್ಲೂಕು ಪಂಚಾಯತಿ ವ್ಯಾಪ್ತಿಯ ಇಂಜಿನಿಯರ್ ಪ್ರಮಾಣೀಕರಿಸಿದ್ದಾರೆ. ಫಲಾನುಭವಿಗಳು ಪಡೆದಿರುವ ಬಗ್ಗೆ ಹಣ ಸಂದಾಯದ ರಸೀತಿಯು ಸಹ ಇರುತ್ತದೆ. ಆರೋಪಿತ ಘಟನಾವಳಿಗಳು ಚಳ್ಳಕೆರೆ ತಾಲ್ಲೂಕು ಕಾರ್ಯನಿರ್ವಾಹಕ ಹುದ್ದೆಯಲ್ಲಿ ಕೇವಲ ನಾಲ್ಕು ತಿಂಗಳು ಪ್ರಭಾರದಲ್ಲಿ ಇಂದಂತಹ ಅವಧಿಗೆ ಸಂಬಂಧಿಸಿರುತ್ತವೆ ಅದು ತಮ್ಮ ರೆಗ್ಯೂಲರ್ ಹುದ್ದೆಯ ಕರ್ತವ್ಯಗಳಿಗೆ ಸಂಬಂಧಿಸಿರುವುದಿಲ್ಲ. ಜಂಟಿ ನಿರ್ದೇಶಕರ ವರದಿ ಸತ್ಯಕ್ಕೆ ದೂರವಾಗಿದ್ದು ಆಧಾರ ರಹಿತವಾಗಿ ವಾಸ್ತವಾಂಶಗಳನ್ನು ಹೊಂದಿರುವುದಿಲ್ಲ. ಶೌಚಾಲಯಗಳನ್ನು ಬೇರೆ ಉದ್ದೇಶಕ್ಕೆ ಬದಲಾಯಿಸಿಕೊಂಡಿರುವುದಕ್ಕೆ ತಾವು ಜವಾಬ್ದಾರರಲ್ಲ. ಇದರಿಂದಾಗಿ ಯಾವುದೇ ದುರ್ನಡತೆಯನ್ನು ಎಸಗಿಲ್ಲವೆಂದು ತಿಳಿಸಿರುತ್ತಾರೆ.

ಶ್ರೀ ಹೆಚ್.ಬಿ. ಶಂಕರಪ್ಪ, ಕಿರಿಯ ಇಂಜಿನಿಯರ್ ಅವರು 20-12-2001ರ ಉತ್ತರ ಸಲ್ಲಿಸಿ ನಿರ್ಮಿಸಿದಂತಹ ಕೆಲವು ಶೌಚಾಲಯಗಳನ್ನು ಕೆಲವರು ಕಿತ್ತು ಹಾಕಿ ನಂತರ ಅದನ್ನು ಬಚ್ಚಲು ಮನೆಯನ್ನಾಗಿ ಮಾಡಿಕೊಂಡಿರುತ್ತಾರೆ. ಫಲಾನುಭವಿ ಆಯ್ಕೆ ಪಟ್ಟಿ ಪ್ರಕಾರ 10 ಫಲಾನುಭವಿಗಳು ಶೌಚಾಲಯಗಳನ್ನು ನಿರ್ಮಿಸಿರುವುದನ್ನು ಖಚಿತ ಪಡಿಸಿಕೊಂಡೇ ಸಹಾಯಧನ ಬಿಡುಗಡೆ ಮಾಡಲಾಗಿದೆ. ಫಲಾನುಭವಿಗಳಿಂದ ಹಣ ಸಂದಾಯಕ್ಕೆ ರಸೀತಿ ಪಡೆಯಲಾಗಿದ್ದು, ಅವರಿಂದ ಯಾವುದೇ ತಕರಾರು ಬಂದಿರುವುದಿಲ್ಲ. ಜಂಟಿ ನಿರ್ದೇಶಕರು ನೀಡಿರುವ ವರದಿಯು ಏಕ ಪಕ್ಷೀಯ ಹಾಗೂ ಅಪೂರ್ಣವಾದ ವರದಿಯಾಗಿದೆ. ತದನಂತರ ಶೌಚಾಲಯಗಳನ್ನು ಸರಿಯಾಗಿ ನಿರ್ವಹಿಸದೇ ಹಾಳುಗೆಡವಲಾಗಿದೆ. ಈ ಸಂದರ್ಭಗಳಿಂದಾಗಿ ತಮ್ಮಿಂದ ಯಾವ ದುರ್ನಡತೆಯೂ ಎಸಗಲ್ಪಟ್ಟಿಲ್ಲ ಮತ್ತು ಸರ್ಕಾರಿ ಹಣವನ್ನು ದುರುಪಯೋಗಪಡಿಸಿಕೊಂಡಿರುವ ಅಂಶವು ಇಲ್ಲವಾಗಿರುವುದರಿಂದ ತಮ್ಮ ಮೇಲಿನ ದೋಷಾರೋಪಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಶ್ರೀ ಪಿ.ಜಿ. ಶ್ರೀಹರಿಯವರು ದಿನಾಂಕ: 20-12-2001ರ ಉತ್ತರ ಸಲ್ಲಿಸಿ ನಿರ್ಮಲ ಕರ್ನಾಟಕ ಯೋಜನೆಯು ಹೊಸ ಯೋಜನೆಯಾಗಿದ್ದು ನಿರ್ದಿಷ್ಟ ರೀತಿಯಲ್ಲಿ ಕಟ್ಟಬೇಕೆಂದು ಯಾವುದೇ ಸೂಕ್ತ ಮಾಹಿತಿ ಇರುವುದಿಲ್ಲ. ಈ ಶೌಚಾಲಯಕ್ಕೆ ಫಲಾನುಭವಿಗಳ ಪೂರ್ಣ ಸಹಕಾರ ಅತಿ ಅವಶ್ಯಕವಾಗಿ ಬೇಕಾಗಿರುತ್ತದೆ. ಫಲಾನುಭವಿಗಳನ್ನು ಗ್ರಾಮ ಪಂಚಾಯಿತಿಯಿಂದ ಆಯ್ಕೆಮಾಡಿ ತಾಲ್ಲೂಕು ಪಂಚಾಯತಿಗೆ ಕಳುಹಿಸುತ್ತಿದ್ದರು. ಶೌಚಾಲಯಗಳಿಗೆ ಹಣ ಡ್ರಾ ಮಾಡಿ ಫಲಾನುಭವಿಗಳಿಂದ ಹಣ ಸಂದಾಯ ರಸೀದಿ ಪಡೆಯಲಾಗಿದೆ. ಜಂಟಿ ನಿರ್ದೇಶಕರು, ಸ್ಥಳ ತನಿಖೆ ಮಾಡುವಾಗ ಏಕ ಪಕ್ಷೀಯವಾಗಿ ತನಿಖೆ ಮಾಡಿರುತ್ತಾರೆ. ಶೌಚಾಲಯಗಳು ಹಾಳಾಗಿರುವ ಸಾಧ್ಯತೆಗಳು ಇರುವುದರಿಂದ ಹಾಗೂ ಫಲಾನುಭವಿಗಳಿಂದ ಯಾವುದೇ ತಕರಾರು ಬಂದಿರುವುದಿಲ್ಲ. ಸರ್ಕಾರದ ಹಣವನ್ನು ಯಾವುದೇ ಹಂತದಲ್ಲಿಯೂ ದುರುಪಯೋಗಪಡಿಸಿಕೊಂಡಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ರೀತಿಯಾಗಿ ಆರೋಪಿತ ಅಧಿಕಾರಿಗಳು:ನೌಕರರುಗಳು ತಮ್ಮ ಉತ್ತರಗಳಲ್ಲಿ ತಾವುಗಳು ಯಾವುದೇ ರೀತಿಯ ಕಾನೂನು ಬಾಹಿರವಾದ ವಂಚನೆಯಾಗಲಿ ದುರ್ನಡತೆಯಾಗಲಿ ಸರ್ಕಾರಕ್ಕೆ ಆರ್ಥಿಕ ನಷ್ಟವಾಗಲೀ ಮಾಡದೇ ಇರುವುದರಿಂದ ತಮ್ಮಗಳೆಲ್ಲರನ್ನೂ ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ. ಆರೋಪಿತ ಅಧಿಕಾರಿ:ನೌಕರರುಗಳ ಉತ್ತರಗಳನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿಕೊಂಡು ಪ್ರಕರಣವನ್ನು ಮುಕ್ತಾಯಗೊಳಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಎಸ್‌ಇಎನ್ 99, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಬಿ. ರಾಜಣ್ಣ, ಕೆಎಎಸ್ (ಕಿ.ಶ್ರೇ) ಅಧಿಕಾರಿ ಶ್ರೀ ಹೆಚ್.ಬಿ. ಶಂಕರಪ್ಪ, ಕಿರಿಯ ಇಂಜಿನಿಯರ್ ಮತ್ತು ಶ್ರೀ ಪಿ.ಜಿ. ಶ್ರೀಹರಿ ಅವರುಗಳನ್ನು ದಿನಾಂಕ: 7-11-2001 ಹಾಗೂ ಶ್ರೀ ಗೋಪಾಲ್, ಪರಿಷತ್ ಕಾರ್ಯದರ್ಶಿ ಅವರನ್ನು ದಿನಾಂಕ:3-7-2001ರ ನೋಟೀಸ್‌ಗಳಲ್ಲಿ ಮಾಡಿದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1123

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಅಟ್ಟಿಲಕ್ಕಮ್ಮ ವಿದ್ಯಾ ಸಂಸ್ಥೆ, ಮಹದೇಶ್ವರ ನಗರ, ಚನ್ನಪಟ್ಟಣ, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಸಂಸ್ಥೆಗೆ ನೇಮಕವಾಗಿದ್ದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 33 ಮುನೋಸೊ 99, ದಿನಾಂಕ: 2.3.2002.
2. ರಿಟ್ ಪಿಟಿಷನ್ 8675/2002 ರಲ್ಲಿ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ: 30.7.2002.
3. WA 5122/02 C/W W.A.4936/09 (GM) in WA 5122/02 ರಲ್ಲಿ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ:1.8.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಶ್ರೀ ಅಟ್ಟಿಲಕ್ಕಮ್ಮ ವಿದ್ಯಾಸಂಸ್ಥೆ, ಮಹದೇಶ್ವರ ನಗರ, ಚನ್ನಪಟ್ಟಣ ಈ ಸಂಸ್ಥೆಗೆ 6 ತಿಂಗಳ ಅವಧಿಗೆ ಆಡಳಿತಾಧಿಕಾರಿ ನೇಮಕ ಮಾಡಲಾಗಿತ್ತು. ಓದಲಾದ (2)ರ ಪ್ರಕಾರ ಉಚ್ಚ ನ್ಯಾಯಾಲಯವು ಆಡಳಿತಾಧಿಕಾರಿ ನೇಮಕವನ್ನು ರದ್ದುಪಡಿಸಿತು. ಓದಲಾದ (3)ರ ಪ್ರಕಾರ ಉಚ್ಚ ನ್ಯಾಯಾಲಯವು ಆಡಳಿತಾಧಿಕಾರಿ ನೇಮಕಾತಿ ರದ್ದುಪಡಿಸಿದ ಆಜ್ಞೆಯನ್ನು ದಿನಾಂಕ:1.8.2003 ರಿಂದ 3 ವಾರಗಳ ಕಾಲ ತೆರವುಗೊಳಿಸಿ ಆದೇಶಿಸಿದೆ. ಈ ಹಿನ್ನೆಲೆಯಲ್ಲಿ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವುದು ಸೂಕ್ತವೆಂದು ಮನಗಂಡ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 2.9.2002 ರಿಂದ 1.3.2003 ರವರೆಗೆ ಹಾಗೂ 2.3.2003 ರಿಂದ 1.9.2003 ರವರೆಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 33 ಮುನೋಸೊ 99, ಬೆಂಗಳೂರು, ದಿನಾಂಕ: 28ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಅಟ್ಟಿಲಕ್ಕಮ್ಮ ವಿದ್ಯಾ ಸಂಸ್ಥೆ, ಮಹದೇಶ್ವರ ನಗರ, ಚನ್ನಪಟ್ಟಣ ತಾಲ್ಲೂಕು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ನೇಮಕವಾದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 2.9.2002 ರಿಂದ 1.3.2003 ರವರೆಗೆ ಹಾಗೂ 2.3.2003 ರಿಂದ 1.9.2003 ರವರೆಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1124

**ಸಿ. ಚನ್ನೇಗೌಡ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ENERGY SECRETARIAT

**Sub:** Release of subsidy on account of IP sets consumers under LT-4(a)(i) category-Reg.

**Read:**
1. Notification No. DE 68 PSR 2001 dated 24.06.2002
2. Notification No. DE 11 PSR 2002 dated 17.10.2002
3. KERC Letter No.B/07/01/1843, dated 14.11.2002.
4. G.O. No. DE 75 EEB 2002 dated 03.05.2002.
5. G.O. No. DE 75 EEB 2002 dated 29.05.2002.
6. G.O. No. DE 75 EEB 2002 dated 26.06.2002.
7. G.O. No. DE 75 EEB 2002 dated 02.08.2002.
8. G.O. No. DE 75 EEB 2002 dated 23.08.2002.
9. G.O. No. DE 75 EEB 2002 dated 30.09.2002.
10. G.O. No. DE 75 EEB 2002 dated 08.11.2002.
11. G.O. No. DE 75 EEB 2002 dated 04.12.2002.
12. G.O. No. DE 75 EEB 2002 dated 07.01.2003.
13. G.O. No. DE 75 EEB 2002 dated 11.02.2003.
14. G.O. No. DE 75 EEB 2002 dated 29.03.2003.

**PREAMBLE:**

1. In the Notification dated 24.06.2002 and 17.10.2002 read at (1) and (2) above, Policy directives were issued stating that:-
   (1) all the IP set consumers chargeable at the rates applicable to category IT 4a(i) of the Tariff order dated 8-5-2002 issued by the KERC shall be granted subsidy equivalent to the amount of tariff so payable which is in excess of Rs.540 per HP or part there-of per annum of the sanctioned load until the Meters are fixed.
   (2) in the case of Metered installations under LT4a(i) category of the said tariff order, subsidy shall be granted equivalent to the amount of tariff so payable which is in excess of Rs.540 per HP or part thereof per annum of the sanctioned load or in excess of fixed charges of Rs.10 per HP per month, and energy charges levied at 40 paise per unit, as the case may be;
   (3) all IP set consumers metered and chargeable at the rates applicable to category LT4a(ii) and LT4b of the said Tariff Order shall be granted subsidy equivalent to the amount of tariff so payable, if any, in excess of the horse power based flat rate tariffs payable and these directives shall be effective from the first meter reading date, on or after the first day of july, 2002.
2. The budget provision of Rs.2511.68 Crores is made towards RE subsidy and other items payable to KPTCL (in the revised estimate) for FY 2002-03.
3. Government of Karnataka has released Rs.529 crores in cash as RE subsidy to KPTCL vide various Government Orders read from (4) to (14) above under the head of account '2801-60-101-1-04-106 Subsidy "(Non-plan).

4. KERC in its letter dated 14.11.2002, read at (3) above, directed to release the amount of subsidy of Rs.91.50 crores (for 9 months in FY 2002-03) in cash to KPTCL in quarterly installments as under:
   (a) the first instalment of Rs.30.5 crores that was due on 30.9.2002 shall be released at the earliest;
   (b) the second instalment of Rs.30.5 crores shall be released on 31.12.2002; and
   (c) the balance amount be released to KPTCL after receiving complete details from KPTCL/ESCOMs in this regard.

Hence, this order.

**Government Order No.DE 39 PSR 2001, Dated: 31st March 2003**

In the circumstances explained in the preamble, Government are pleased to release by adjustment the outstanding subsidy of Rs.91.50 crores due to KPTCL on account of granting subsidy to IP Set Consumers under LT-4A(i) category for FY 2002-03 out of Rs.529 crores already released in cash under the Head of Account "2801-80-101-1-04-106 Subsidy" (Non-plan) towards RE subsidy, for the year 2002-03.

Sanction is hereby accorded to KPTCL and ESCOMs to carryout necessary adjustments in their Books of Accounts for 2002-03.

This Order issues with the concurrence of the Finance Department vide their UO Note No. FD 05 BGL 03 dated 31.03.2003.

By Order and in the name of the Governor of Karnataka,

**K.L. JAYARAM**

P.R. 1130

Under Secretary to Government,
Energy Department.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎ.ಬಿ. ಪಾಟೀಲ್, ಗ್ರಾಮಲೆಕ್ಕಿಗರು, ಗೋಜಗ ಗ್ರಾಮ ಬೆಳಗಾವಿ ತಾಲ್ಲೂಕು ಇವರ ವಿರುದ್ಧದ ಲೋಕಾಯುಕ್ತ ಪ್ರಕರಣ ಕುರಿತು ಆರೋಪಗಳಿಂದ ಮುಕ್ತರನ್ನಾಗಿಸುವ ಬಗ್ಗೆ-ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 104 ಬಿಡಿಪಿ 2002, ದಿನಾಂಕ: 25-10-2002.
2. ಮಾನ್ಯ ಲೋಕಾಯುಕ್ತರ ಪತ್ರ ಸಂಖ್ಯೆ.ಎಲ್‌ಎಕ್ಯೂ:ಎಆರ್‌ಇ 4:ಇಎನ್‌ಕ್ಯೂ:71:2002-03 ದಿನಾಂಕ: 3-7-2003.

**ಪ್ರಸ್ತಾವನೆ:**

ಶ್ರೀ ಎ.ಬಿ. ಪಾಟೀಲ್ ಗ್ರಾಮಲೆಕ್ಕಿಗರು ಗೋಜಗ ಗ್ರಾಮ, ಬೆಳಗಾವಿ ತಾಲ್ಲೂಕು ಇವರು ಶ್ರೀ ಕಲ್ಲಪ್ಪಾಯಲ್ಲಪ್ಪಾ ನಾಯಕ, ಗೋಜಗಯ ಗ್ರಾಮ, ಬೆಳಗಾವಿ ತಾಲ್ಲೂಕು ಇವರಿಂದ ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದ ಹಿನ್ನೆಲೆಯಲ್ಲಿ ಇಲಾಖಾ ವಿಚಾರಣೆ ನಡೆಸಲು ಓದಲಾದ (1)ರ ದಿನಾಂಕ:25-10-2002 ಆದೇಶದಲ್ಲಿ ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿತ್ತೆ.

ವಿಚಾರಣಾಧಿಕಾರಿಯವರು ಶ್ರೀ ಎ.ಬಿ. ಪಾಟೀಲ್ ಗ್ರಾಮಲೆಕ್ಕಿಗರು ಗೋಜಗ ಗ್ರಾಮ, ಬೆಳಗಾವಿ ತಾಲ್ಲೂಕು ಇವರ ಮೇಲಿನ ಆರೋಪಗಳನ್ನು ಅಂದರೆ ಅಕ್ರಮ ಸಂಭಾವನೆ ಸ್ವೀಕರಿಸಿರುವುದು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ. ವಿಚಾರಣಾಧಿಕಾರಿಗಳ ವರದಿಯ ಮೇರೆಗೆ ಗೌ:ಲೋಕಾಯುಕ್ತರವರು ಆರೋಪಿಯನ್ನು ದೋಷಮುಕ್ತರೆಂದು ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಶ್ರೀ ಎ.ಬಿ. ಪಾಟೀಲ್ ಇವರನ್ನು ಇಲಾಖಾ ವಿಚಾರಣೆಯಿಂದ ಕೈಬಿಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 104 ಬಿಡಿಪಿ 2002, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಎ.ಬಿ. ಪಾಟೀಲ್, ಗ್ರಾಮ ಲೆಕ್ಕಿಗರು ಗೋಜಗ ಗ್ರಾಮ, ಬೆಳಗಾವಿ ತಾಲ್ಲೂಕು ಇವರ ವಿರುದ್ಧ, ಮಾಡಲಾದ ಭ್ರಷ್ಟಾಚಾರದ ಆರೋಪ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿಲ್ಲದ ಕಾರಣ, ಅವರನ್ನು ಆರೋಪಗಳಿಂದ ದೋಷಮುಕ್ತರನ್ನಾಗಿಸಿ ಇವರ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 1133

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು 1 & 2)

## FOREST, ECOLOGY AND ENVIRONMENT SECRETARIAT

**Sub:** Diversion of 18.75 ha of forest land for construction of 220 KV MC line by tapping from the existing 220 KV Sharavathi-Hubli line to 400 KV Station of Else Village in North Kanara District.

**Read:**
1. Letter No.A5(2)GFI.CR.1/97-98 dated 12-4-2002 and 22.4.2003 of Principal Chief Conservator of Forests, Bangalore.
2. State Government letter No.FEE 2 FGL 98 dated 11.9.2000, 20.2.2000 and 19.5.2003.
3. Letter No. F(C)A/16.1/KAR/89/TL/1168 dated 12-10-2001 and 12.6.2003, of Government of India, Ministry of Environment and Forests, Regional Office, (South Zone), Bangalore.

**PREAMBLE:**

The Principal Chief Conservator of Forests, Bangalore in his letter dated 22-4-2003 cited (1) above has submitted proposals to Government for release of an area of 18.75 ha of forest land required for construction of 220 KV MC line by taping from the existing 220 KV Sharavathi-Hubli line to 400 KV Station of Else Village in Sirsi Taluk, N.K.District in favour of Karnataka Power Transmission Corporation Ltd.,

Accordingly the proposal was recommended to Government of India for approval vide State Government letter dated: 11.9.2000 and 20.2.2000 read at (2) above under section (2) of forest (Conservation) Act 1980.

The Government of India Ministry of Environment and Forests, Regional Office, (South Zone), Bangalore has agreed to the proposal in principle (Stage-I) vide letter dated: 12-10-2001 read at (3) above subject to the condition that the cost of raising compensatory afforestation shall be recovered from the user agency.

The compliance report on the condition has been sent to Government of India vide State Government letter dated: 19.5.2003 read at (2) above.

The Government of India, Ministry of Environment and Forests, Regional Office, (South Zone), Bangalore vide their letter dated: 12.6.2003 read at (3) above has conveyed its final approval (Stage-II) in accordance with section (2) of Forest Conservation Act 1980 for the diversion of 18.75 ha of forest land in Sy.No. 20 of Madankeri(V) 13 of Nurkulkoppa(V), 17 Byagadda (V) 64 and 42 of Harsi (V) and 8 of Landakanahalli Village in Sirsi Division, U.K.District for construction of 220 KV MC line by tapping from the existing 220 KV Sharavathi Hubli line to 400 KV Station of Else Village in North Kanara District in favour of Karnataka Power Transmission Corporation Limited, Shimoga with certain conditions.

The proposal has been examined in light of the final approval given by the Government of India and the following orders are issued.

**Government Order No. FEE 2 FGL 98, Bangalore, Dated: 19th August 2003**

After careful consideration of the proposal and under the circumstances stated in the preamble, Government are pleased to accord approval under section (2) of Forest (Conservation) Act 1980 for diversion of 18.75 ha. of forest land in Sy.No.20 of Madankeri Village 13 of Nurkulkoppa Village, 17 of Byagadda Village, 64 and 42 of Harsi Village and 8 of Landakanahalli Village in Sirsi Division, U.K.District for construction of 220 KV MC line by tapping from the existing 220 KV Sharavathi Hubli line to 400 KV Station of Else Village in North Kanara District in favour Karnataka Power Transmission Corporation Limited subject to the following conditions:

1. The legal status of forest land shall remain unchanged.
2. The compensatory afforestation shall be raised over 37.50 ha. of degraded forest land at the cost of user agency.
3. The total forest area utilized for the above project shall not exceed 18.75 ha.
4. The felling of trees in forests area for the project shall be regulated in accordance with the instructions contained in Annexure V of the guidelines issued under the Act.
5. This shall be treated as a perpectual lease and the total forest area utilized for the project shall not exceed 18.75 ha. and it should be used only for the purpose, for which it is granted. In case the land is not used for the stipulated purpose or when it no longer needed for the stipulated purpose the area should automatically revert back to the Forest Department.
6. The lessee; has to pay the lease rent as fixed by the Government from time to time.
7. The case of extraction of tree growth as calculated by the Department shall be paid by the user agency.

8. Any other conditions stipulated by the Government of India/State Government/Principal Chief Conservator of Forests, Karnataka in the interest of conservation of forests.

By Order and in the name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

P.R. 1131

**Sub:** Renewal of mining lease No.1876 in favour of M/s Lakshminarayana MIning Company, Bangalore for Iron ore mines to an extent of 105.22 ha. in N.E.Block, Sandur Taluk, Bellary District.

**Read:**
1. Letter No.A5(B1)MNG.CR.9/2002-03 dated nil /3/2002 of the Principal Chief Conservator of Forests, Bangalore.
2. State Government letter of even number dated 18-3-2003.
3. Government of India, Ministry of Environment and Forests, New Delhi, letter No.8-39/2003-FC(Pt) dated 08-05-2003 and 7/8th July 2003.

**PREAMBLE:**

The Principal Chief Conservator of Forests, Bangalore had sent proposal vide his letter dated nil/3/2002 read at (1) above for renewal of mining lease No. 1876 in favour of M/s Lakshminarayana Mining Company, Bangalore for iron ore mines to an extent of 105.22 ha. which was already broken-up in N.E.Block, Sandur Taluk, Bellary District under section-2 of Forest(Conservation) Act, 1980 for a period of twenty years subject to certain conditions.

The proposal of Principal Chief Conservator of Forests was recommended to Government of India, Ministry of Environment and Forests, New Delhi vide letter of even number dated 18-3-2003 read at (2) above and its approval was sought under section-2 of Forest (Conservation) Act, 1980 for the renewal of mining lease No.1876 and grant of temporary working permission in favour of M/s Lakshminarayana Mining Company.

The Government of India, Ministry of Environment and Forests, New Delhi vide its letter dated 8-5-2003 read at (3) above after considering all the facts of the proposal have accorded temporary working permission for six months with effect from 21-5-2003 to continue mining on already broken up area subject to the conditions that no new area shall be broken up and all environment safeguards shall be adhered to.

Thereafter, Government of India, Ministry of Environment and Forests, New Delhi vide its letter dated 7/8th July 2003 read at (3) above after careful consideration of the proposal of the State Government on the basis of the recommendation of the Advisory Committee, the Central Government has conveyed its approval under Section 2 of Forest(Conservation) Act, 1980 for renewal of mining lease No.1876 in favour of M/s Lakshminarayana Mining Company for Iron Ore Mines over 105.22 ha. of already broken-up forest land in district Bellary subject to fulfillment of certain conditions. Hence, this order.

**Government Order No. FEE 27 FFM 2002, Bangalore, Dated: 2nd September 2003**

After examining all aspects of the matter and inview of the approval accorded to the proposal by the Government of India, Ministry of Environment and Forests, New Delhi, Government are pleased to accord its approval under section 2 of Forest (Conservation) Act, 1980 for renewal of mining lease No.1876 in favour of M/s Lakshminarayana Mining Company for Iron Ore Mines over 105.22 ha. of already broken-up forest land in N.E.Block, Sandur Taluk Bellary District subject to the following conditions:-

1. Legal status of the forest shall remain unchanged.
2. RCC pillars of 4 feet height already erected by the User Agency to demarcate the area shall be maintained by the user agency at the project cost and will be marked with forward and back bearing.
3. The User agency shall maintain Safety Zone already created over equivalent degraded forest land and will also maintain the plantation done over an area one and half times in extent of the safety zone at the project cost.
4. The User Agency will reclaim the area concurrent to mining at the project cost.
5. Trees shall be felled only when it becomes necessary and by prior permission of the State Forest Department.
6. No new construction activity shall be allowed on a forest land.
7. No labour camps shall be established on the forest land.
8. Sufficient firewood shall be provided by the User Agency to the labours at the project cost after purchase from the State Forest Department/Forest Department Corporation.

9. The User Agency shall ensure that there should be no damage to the available wildlife.

10. The approval under the Forest(Conservation) Act, 1980 is subject to the clearance under the Environment (Protection) Act, 1986, if applicable.

11. The lease period shall be co-terminus with the lease granted under MMRD Act, 1957.

12. The forest land shall not be used for any purpose other than that specified in the proposal.

13. Inspector General of Forests and a member of FAC shall visit the site to look into the feasibility if any other condition like imposition of additional compensatory afforestation etc. is required.

14. Any other condition that the State Government as well as CCF (Central), Regional Office, Bangalore and Principal Chief Conservator of Forests may impose from time to time for the protection and improvement of flora and fauna in the forest area.

15. The lessee shall pay usual lease rent and supervision charges as prescribed by the Govt. from time to time.

16. The lessee shall deposit the amount at prevailing rate towards raising of compensatory afforestation if the Govt. of India, MOEF stipulates the same.

17. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.

18. The lessee shall undertake the afforestation measures to vacant area of the leased.

19. The lessee shall carry out soil and water conservation measures and other necessary measures as advised by the Forest Dept.

20. The lessee shall undertake to protect rigidly the leased area and forest area surrounding the area up to one Km. From the leased area.

21. The lessee shall not cut any trees without prior permission of the Forest Dept. and all produce of permitted fellings shall be handed over to Forest Dept. under cover of receipt.

22. The lessee shall abide by all the conditions prescribed by Govt. of India and Govt. of Karnataka.

23. The lessee shall execute an agreement with the Forest Dept. binding himself to abide by all usual conditions and terms as per orders of the Govt. as well as Principal Chief Conservator of Forests.

24. The lessee shall take-up the planting work on the static dumps during the advance mining operations.

25. In case of violation of agreement conditions Forest Dept. shall have right to suspend the mining activities.

By Order and in the name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

P.R. 1132

**ಕಂದಾಯ ಸಚಿವಾಲಯ**

**ವಿಷಯ:** ಕಂದಾಯ ಸದಸ್ಯರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ ಬೆಂಗಳೂರು ಇವರ ಹುದ್ದೆಯನ್ನು ಐ.ಎ.ಎಸ್.ನ ಸೂಪರ್ ಟೈಂ ವೇತನ ಶ್ರೇಣಿಗೆ ನಿಗದಿಪಡಿಸಿ ಸೃಜಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್ 1 ಎಸ್ಎಎಸ್ 2003(22) ಬೆಂಗಳೂರು, ದಿನಾಂಕ:1-7-2003.
2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 1 ಸೆಅಸೆ 2003 (22) ದಿನಾಂಕ: 18-7-2003.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದನ್ವಯ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದ ಕಂದಾಯ ಸದಸ್ಯರ ಹುದ್ದೆಯನ್ನು ಐ.ಎ.ಎಸ್. (ವೇತನ) ನಿಯಮಗಳು 1954 ನಿಯಮ 9 ರನ್ವಯ ಐ.ಎ.ಎಸ್.ನ ಸೂಪರ್ ಟೈಂ ವೇತನ ಶ್ರೇಣಿಗೆ ಸಮಾನಂತರಗೊಳಿಸಲಾಗಿದೆ. ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (2)ರ ಅನಧಿಕೃತ ಟಿಪ್ಪಣಿಯಲ್ಲಿ ಕೋರಲಾಗಿರುವಂತೆ ಶ್ರೀ ಪರಮೇಶ್ ಪಾಂಡೆ, ಐಎಎಸ್ (ಕೆಎನ್ 85) ಇವರನ್ನು ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದ ಕಂದಾಯ ಸದಸ್ಯರನ್ನಾಗಿ ನೇಮಿಸಿ ಆದೇಶ ಹೊರಡಿಸಿರುವುದರಿಂದ ಈ ಅಧಿಕಾರಿಯು ಐ.ಎ.ಎಸ್.ಸೂಪರ್ ಟೈಮ್ ದರ್ಜೆಯ ಅಧಿಕಾರಿಯಾಗಿರುವುದರಿಂದ ಸದರಿ ಕಂದಾಯ ಸದಸ್ಯರ ಹುದ್ದೆಯನ್ನು ಸಮಾನಾಂತರಗೊಳಿಸಬೇಕೆಂದು ಕೋರಲಾಗಿದೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 43 ಆರ್ಎಂಇ 2003, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕಂದಾಯ ಸದಸ್ಯರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು, ಇವರ ಹುದ್ದೆಗೆ ಪ್ರಭಾರ ವ್ಯವಸ್ಥೆ ಮಾಡಲಾಗಿರುವಂತೆ ಶ್ರೀ ಪರಮೇಶ್ ಪಾಂಡೆ, ಐ.ಎ.ಎಸ್. ಇವರು ಕಂದಾಯ

ಸದಸ್ಯರಾಗಿ ಕರ್ನಾಟಕ ನ್ಯಾಯಾಧಿಕರಣದಲ್ಲಿ ಮುಂದುವರೆಯುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಈ ಹುದ್ದೆಯನ್ನು ಐ.ಎ.ಎಸ್. ಸೂಪರ್ ಟೈಂ ವೇತನ ಶ್ರೇಣಿಯಲ್ಲಿ ಮುಂದುವರೆಸಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1012 ವೆಚ್ಚ 7:2003, ದಿನಾಂಕ:30-8-2003 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಬಿ. ಬೆಳಗಾವಿ**

ಪಿ.ಆರ್. 1134 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)

ಕಂದಾಯ ಇಲಾಖೆ (ಕೆ ಎ ಟಿ)

**ವಿಷಯ:** ಇಂಡಿ ತಾಲ್ಲೂಕಿನ ಹಡಲಸಂಗ ಗ್ರಾಮದ ರಿ.ಸ.ನಂ.236:1 ಕ್ಷೇತ್ರ 4 ಎಕರೆ ಮತ್ತು 236:2 ರಲ್ಲಿ ಕ್ಷೇತ್ರ 4 ಎಕರೆ 25 ಗುಂಟೆ ಹೆಚ್ಚುವರಿ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸುವ ಕುರಿತು.

**ಉಲ್ಲೇಖ:** ಜಿಲ್ಲಾಧಿಕಾರಿಗಳು, ವಿಜಾಪುರ ಅವರ ಪತ್ರ ಸಂಖ್ಯೆ:ಆರ್‌ಬಿ:ಎಲ್‌ಆರ್‌ಎಂ:ಸಿಆರ್:121:02-03, ದಿನಾಂಕ: 3-6-2003.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ವಿಜಾಪುರ ಜಿಲ್ಲಾಧಿಕಾರಿಗಳು, ಇಂಡಿ ತಾಲ್ಲೂಕು, ಹಡಲಸಂಗ ಗ್ರಾಮದ ಸರ್ವೆ ನಂ.236:1 ರಲ್ಲಿ 4.00 ಎಕರೆ ಮತ್ತು 236:2 ರಲ್ಲಿ 4.25 ಎಕರೆ ಹೆಚ್ಚುವರಿ ಜಮೀನನ್ನು ಸಾಗುವಳಿಗೆ ಯೋಗ್ಯವಿಲ್ಲದ ಪ್ರಯುಕ್ತ, ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 77(3)ರ ಪ್ರಕಾರ ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸಿ ಸರ್ಕಾರದ ಅನುಮತಿ ಪಡೆದು ಕಳುಹಿಸುವಂತೆ ಕೋರಲಾಗಿದ್ದು, ಆದರಂತೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 96 ಎಲ್‌ಆರ್‌ಎಂ 2003, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2003**

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು, ಹಡಲಸಂಗ ಗ್ರಾಮದ ಸರ್ವೆ ನಂಬರ್ 236:1 ರಲ್ಲಿ 4.00 ಎಕರೆ ಮತ್ತು 236:2 ರಲ್ಲಿ 4.25 ಎಕರೆ ಹೆಚ್ಚುವರಿ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಕರ್ನಾಟಕ ಭೂಸುಧಾರಣೆ ಕಾಯ್ದೆ, 1961ರ ಕಲಂ 77(3)ರ ಅಡಿಯಲ್ಲಿ ಕಾಯ್ದಿರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಧಾಕೃಷ್ಣ**

ಪಿ.ಆರ್. 1135 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಸು).

**ಸುತ್ತೋಲೆ**

**ಸಂಖ್ಯೆ:ಆರ್‌ಡಿ:7:ಎಲ್‌ಜಿಪಿ:95, ಬೆಂಗಳೂರು, ದಿನಾಂಕ: 2ನೇ ಸೆಪ್ಟೆಂಬರ್ 2003**

ಸರ್ಕಾರದ ಸುತ್ತೋಲೆ ಸಂಖ್ಯೆ:ಆರ್‌ಡಿ:7:ಎಲ್‌ಜಿಪಿ:95, ದಿನಾಂಕ:7-6-99 ರಂದು ಹೊರಡಿಸಿರುವ ಸುತ್ತೋಲೆಗೆ ದಿನಾಂಕ:7-6-2000 ರಂದು ತಿದ್ದೋಲೆಯನ್ನು ಹೊರಡಿಸಲಾಗಿದೆ.

ಈ ತಿದ್ದೋಲೆ ನಿರ್ದೇಶನದಂತೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನೆ ಕಾಯ್ದೆ ಅಡಿ ಘೋಷಿಸಲಾದ ಸ್ಥೂಲಾಭಿವೃದ್ಧಿ ಯೋಜನೆ ವ್ಯಾಪಕಾಭಿವೃದ್ಧಿ ಯೋಜನೆಗಳ ಅನ್ವಯ ನಿಗದಿಪಡಿಸಲಾದ ಉದ್ದೇಶಕ್ಕೆ ಭೂ ಪರಿವರ್ತನಾ ಮನವಿ ಬಂದಲ್ಲಿ ಅಂತಹ ಮನವಿಯನ್ನು ಜಿಲ್ಲಾಧಿಕಾರಿಗಳು ತಿರಸ್ಕರಿಸಬಾರದೆಂದು ಸೂಚಿಸಿದೆ. ಅಲ್ಲದೆ ಸ್ಥೂಲಾಭಿವೃದ್ಧಿ ಯೋಜನೆ ಮತ್ತು ವ್ಯಾಪಕಾಭಿವೃದ್ಧಿ ಯೋಜನೆ ಘೋಷಣೆಯಾಗದ ಪ್ರದೇಶಗಳಿಗೆ ಭೂ ಪರಿವರ್ತನಾ ಅರ್ಜಿಗಳು ಬಂದಲ್ಲಿ ಅಂತಹ ಅರ್ಜಿಗಳನ್ನು ಬಿ.ಎಂ.ಆರ್.ಡಿ.ಎ : ಬಿ.ಐ.ಎ.ಎ.ಪಿ.ಎ : ಯು.ಡಿ.ಎಸ್ ಗಳ ಅಭಿಪ್ರಾಯವನ್ನು ಪಡೆದುಕೊಳ್ಳುವುದನ್ನು ಕಡ್ಡಾಯಗೊಳಿಸಲಾಗಿದೆ.

ಈ ತಿದ್ದೋಲೆಯು ಸಣ್ಣ ರೈತರಿಗೆ ಹಾಗೂ ಕೃಷಿ ಆಧಾರಿತ ರೈತಾಪಿ ಜನರಿಗೆ ಪೂರಕವಾಗಿದೆ ಹಾಗೂ ಬಂಡವಾಳ ಶಾಯಿಗಳ ಅವ್ಯವಹಾರಗಳಿಗೆ ಅವಕಾಶ ಮಾಡಿಕೊಟ್ಟಂತಾಗುತ್ತದೆ ಎಂಬುದಾಗಿ ದೂರುಗಳು ಬಂದಿರುವ ಹಿನ್ನೆಲೆಯಲ್ಲಿ ಇದೇ ಸಮ ಸಂಖ್ಯೆಯ ದಿನಾಂಕ:7-6-2000ರ ತಿದ್ದೋಲೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

**ಹೆಚ್.ಎಸ್. ಗಣೇಶ ಮೂರ್ತಿ**

ಪಿ.ಆರ್. 1136 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ.ಮಂ.)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ನೆಫ್ರೋ ಯೂರಾಲಜಿ ಸಂಸ್ಥೆ ಸ್ಥಾಪನೆ.

**ಓದಲಾಗಿದೆ:**

1. ತಾರೀಖು 16-10-2001 ಮತ್ತು 08-07-2003 ಸಂಖ್ಯೆ ಎಂ.ಇ.ಪಿ.(1) / 68/2000--01 ಮತ್ತು PLN/ME /5/2003-04ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
2. ತಾರೀಖು 22-11-2001 ಸಂಖ್ಯೆ ಆಕುಕ 274 MSF 2000ದ ಸರ್ಕಾರಿ ಆದೇಶ
3. ತಾರೀಖು 31-7-2002 ಸಂಖ್ಯೆ Z 28016 /78/2002-Hರ ಅಂದಿನ ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಪತ್ರ.

4. ತಾರೀಖು 22-8-2002 ಸಂಖ್ಯೆ KHSDP / EE / BNG / OPEC / III / 2002-03/551ರ ಕರ್ನಾಟಕ ಆರೋಗ್ಯ ಪದ್ಧತಿ ಅಭಿವೃದ್ಧಿ ಯೋಜನೆ ಕಾರ್ಯಪಾಲಕ ಇಂಜಿನಿಯರ್ ರವರ ಪತ್ರ.
5. ತಾರೀಖು 14-6-2003ರ ಪತ್ರದಲ್ಲಿ ಅಂತ್ಯಗೊಂಡ ನೆಫ್ರೋ ಯೂರಾಲಜಿ ಸಂಸ್ಥೆ ಸ್ಥಾಪನೆಯ ವಿಶೇಷಾಧಿಕಾರಿರವರ ಪತ್ರ.

**ಪೀಠಿಕೆ:**

1. ನೆಫ್ರೋಲಜಿಯ ವೈದ್ಯಕೀಯ ವಿಜ್ಞಾನದ ಒಂದು ಪದ್ಧತಿಯಾಗಿದ್ದು, ಮೂತ್ರಪಿಂಡದ ವೈಫಲ್ಯತೆ ಮತ್ತು ಜೋಡಣೆಯನ್ನೊಳಗೊಂಡಂತೆ ಮಾತ್ರಪಿಂಡದ ಖಾಯಿಲೆಗಳಿಗೆ ಸಂಬಂಧಿಸಿದೆ ಮೂತ್ರರೋಗಶಾಸ್ತ್ರವು ವೈದ್ಯಕೀಯ ವಿಜ್ಞಾನದ ವಿಭಾಗವಾಗಿದ್ದು, ಯುರೋಜೆನೈಟಲ್ ಖಾಯಿಲೆಗಳಿಗೆ ಸಂಬಂಧಿಸಿದೆ. ಮೂತ್ರ ಪಿಂಡದಲ್ಲಿನ ಕಲ್ಲುಗಳ ಖಾಯಿಲೆ, ಪ್ರೋಸ್ಟ್ರಾಟಿಕ್ ಎನ್‌ಲಾರ್ಜ್‌ಮೆಂಟ್, ಮೂತ್ರ ಪಿಂಡದ ಅರ್ಬುದರೋಗ, ಟೆಸ್‌ಟಿಸ್ ಹಾಗೂ ಪುರುಷ ಬಂಜೆತನವನ್ನು ಇದು ಒಳಗೊಂಡಿರುತ್ತದೆ. ಖಾಸಗಿ ವಲಯದಲ್ಲಿ ಚಿಕಿತ್ಸೆ ಪಡೆಯುವ ವೆಚ್ಚವನ್ನು ಭರಿಸಲು ಸಾಧ್ಯವಾಗದಂತ ಬಡವರ ಅಗತ್ಯತೆಯನ್ನು ಪೂರೈಸುವ ಸಲುವಾಗಿ ನೆಫ್ರೋಯುರಾಲಜಿ ಸಂಸ್ಥೆಯನ್ನು ಸ್ಥಾಪಿಸಲು ಸರ್ಕಾರವು ಉದ್ದೇಶಿಸಿದೆ. ಮೂತ್ರ ರೋಗಶಾಸ್ತ್ರದಲ್ಲಿ ಪೀಡಿಯಾಟ್ರಿಕ್ ಯುರಾಲಜಿ, ಎಂಡ್ಯುರಾಲಜಿ, ಯುರೋ-ಆಂಕಾಲಜಿ, ಆ್ಯಂಡ್ರೋಲಜಿ ಮತ್ತು ಫೀಮೇಲ್ ಯುರಾಲಜಿಗಳು ಉಪ-ವಿಭಾಗಗಳಾಗಿವೆ. ನೆಫ್ರಾಲಜಿಯನ್ನು ಅಡಲ್ಟ್ ನೆಫ್ರಾಲಜಿ ಮತ್ತು ಪೀಡಿಯಾಟ್ರಿಕ್ ನೆಫ್ರಾಲಜಿ ಎಂದು ವಿಭಜಿಸಲಾಗಿದೆ. ಅತ್ಯಧಿಕ ಸಂಖ್ಯೆಯಲ್ಲಿ ಹೆಚ್ಚುತ್ತಿರುವ ರೋಗಿಗಳಿಗೆ ಚಿಕಿತ್ಸೆಯನ್ನು ಪೂರೈಸಲು ಅತ್ಯಾಧುನಿಕ ಸಂಸ್ಥೆಯನ್ನು ಪ್ರಾರಂಭಿಸುವುದು ಅಗತ್ಯವಾಗಿದೆ. ಈಗ ಅಸ್ತಿತ್ವದಲ್ಲಿರುವ ಸೌಲಭ್ಯಗಳಲ್ಲಿ ಉತ್ತಮ ಗುಣಮಟ್ಟದ ಸೇವೆಯನ್ನು ಒದಗಿಸುವುದು ಕಷ್ಟಕರವಾಗಿದೆ. ಮೂತ್ರಪಿಂಡ ಜೋಡಣೆಯ ರೋಗಿಗಳು ಸೋಂಕಿಗೆ ಒಳಗಾಗುವ ಕಾರಣ ಇತರೆ ರೋಗಿಗಳಿಂದ ಅವರನ್ನು ಬಾಹ್ಯವಾಗಿಡಬೇಕು. ಇದು ಸಾರ್ವಜನಿಕ ಆಸ್ಪತ್ರೆಗಳಲ್ಲಿ ಸಾಧ್ಯವಾಗುವುದಿಲ್ಲ. ನೆಫ್ರೋ-ಯುರಾಲಜಿ ಖಾಯಿಲೆಗಳಿಗೆ ಚಿಕಿತ್ಸೆಯ ಸೌಲಭ್ಯವು ಖಾಸಗಿ ಆಸ್ಪತ್ರೆಗಳಲ್ಲಿ ಲಭ್ಯವಿದ್ದರೂ ಸಹ, ಮೂತ್ರಪಿಂಡ ಜೋಡಣೆಗೆ ಅಧಿಕ ವೆಚ್ಚ ಉಂಟಾಗುತ್ತಿದ್ದು ಇದು ಜನಸಾಮಾನ್ಯರಿಗೆ ಎಟುಕುವಂತಿಲ್ಲ. ಪ್ರಸ್ತುತದಲ್ಲಿ ಪ್ರೊಸ್ಟೇಟ್, ಮೂತ್ರಪಿಂಡ, ಟೇಸ್ಟಿಸ್‌ಗಳಿಗೆ ಸಂಬಂಧಿಸಿದ ಶಸ್ತ್ರಚಿಕಿತ್ಸೆಯನ್ನು ಸರ್ಕಾರಿ ಆಸ್ಪತ್ರೆಗಳಲ್ಲಿ ಮಾಡಲಾಗತ್ತಿದ್ದರೂ, ನೂತನ ತಾಂತ್ರಿಕತೆ ಮತ್ತು ಸಾಧನಸಲಕರಣೆಗಳ ಕೊರತೆಯಿಂದಾಗಿ ಸರ್ಕಾರಿ ಆಸ್ಪತ್ರೆಗಳಲ್ಲಿ ನಿರಂತರವಾಗಿ ಹೆಚ್ಚಾಗುತ್ತಿರುವ ರೋಗಿಗಳ ಅವಶ್ಯಕತೆಯನ್ನು ಪೂರೈಸಲು ಸಾಧ್ಯವಾಗುತ್ತಿಲ್ಲ. ಇದರಿಂದಾಗಿ ಕರ್ನಾಟಕದಲ್ಲಿ ಒಂದು ಪ್ರತ್ಯೇಕವಾದ ನೆಫ್ರೋ-ಯುರಾಲಜಿ ಸಂಸ್ಥೆಯನ್ನು ಸ್ಥಾಪಿಸುವುದು ಅತ್ಯಾವಶ್ಯಕವಾಗಿದೆ.

2. ತಾರೀಖು 25-5-2000 ಸಂಖ್ಯೆ:ಆಕುಕ 274 ಎಂಎಸ್‌ಎಫ್ 2000ದ ಅಧಿಕೃತ ಜ್ಞಾಪನದಲ್ಲಿ ಸರ್ಕಾರವು ಸಂಸ್ಥೆಯ ಅತ್ಯಾವಶ್ಯಕತೆಯನ್ನು ಅಧ್ಯಯಿಸಲು ಮತ್ತು ರೂಪುರೇಷೆಗಳನ್ನು ರೂಪಿಸಿ ವರದಿ ಸಲ್ಲಿಸಲು ಒಂದು ಸಮಿತಿಯನ್ನು ಸ್ಥಾಪಿಸಿತ್ತು. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ನೇತೃತ್ವದ ಮತ್ತು ಬೆಂಗಳೂರಿನ ಸರ್ಕಾರಿ ವೈದ್ಯಕೀಯ ಕಾಲೇಜಿನ ಮೂತ್ರರೋಗಶಾಸ್ತ್ರ ಪ್ರಾಧ್ಯಾಪಕ ಡಾ.ಜಿ.ಕೆ.ವೆಂಕಟೇಶ್‌ರವರು ಸದಸ್ಯ ಕಾರ್ಯದರ್ಶಿಯಾಗಿದ್ದು ಈ ಸಮಿತಿಯು ಪ್ರಸ್ತಾಪಿತ ಸಂಸ್ಥೆಯ ಸ್ಥಾಪನೆಗೆ ಶಿಫಾರಸ್ಸು ಮಾಡಿ ವರದಿಯನ್ನು ಸಲ್ಲಿಸಿತ್ತು. ಸಮಿತಿಯ ಶಿಫಾರಸ್ಸಿನ ಮೇರೆಗೆ ತಾರೀಖು 22-1-2001 ಸಂಖ್ಯೆ:ಆಕುಕ 274 ಎಂಎಸ್‌ಎಫ್ 2000ದ ಸರ್ಕಾರಿ ಆದೇಶದಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜಿನ ಮೂತ್ರರೋಗ ಶಾಸ್ತ್ರ ಪ್ರಾಧ್ಯಾಪಕ ಡಾ.ಜಿ.ಕೆ. ವೆಂಕಟೇಶ್ ರವರನ್ನು ಸಂಸ್ಥೆಯ ಸ್ಥಾಪನೆಗೆ ಪೂರಕವಾದ ಅಗತ್ಯ ಕ್ರಮವನ್ನು ಕೈಗೊಳ್ಳುವ ಸಲುವಾಗಿ ವಿಶೇಷ ಕರ್ತವ್ಯಾಧಿಕಾರಿಯನ್ನಾಗಿ ನೇಮಿಸಿತ್ತು.

3. ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯ ಸಂಕೀರ್ಣದಲ್ಲಿದ್ದ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ಹೊಸ ಕಟ್ಟಡಕ್ಕೆ ಸ್ಥಳಾಂತರಗೊಂಡಿದ್ದರಿಂದ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯು ಆವರಿಸಿದ್ದ ಕಟ್ಟಡ ಮತ್ತು ಆವರಣವನ್ನು ಸಂಪೂರ್ಣವಾಗಿ ಪ್ರಸ್ತಾಪಿತ ಸಂಸ್ಥೆಗೆ ಈಗಾಗಲೇ ಸರ್ಕಾರ ಒದಗಿಸಿದೆ. ಪ್ರಸ್ತಾಪಿತ ಸಂಸ್ಥೆಯನ್ನು 1960ರ ಕರ್ನಾಟಕ ಸಹಕಾರ ಸಂಘಗಳ ನೋಂದಣಿ ಅಧಿನಿಯಮದಡಿ ನೋಂದಾಯಿಸಲು ಉದ್ದೇಶಿಸಲಾಗಿದೆ. ಅದಕ್ಕೆ ಪೂರಕವಾದ ಸಂಸ್ಥೆಯ ಮೆಮೋರಾಂಡಂ ಆಫ್ ಅಸೋಸಿಯೇಷನ್ ಮತ್ತು ನಿಯಮಾವಳಿ ಹಾಗೂ ಪರಿನಿಯಮಾವಳಿಯನ್ನು ಕಾನೂನು ಇಲಾಖೆಯ ಸಮಾಲೋಚನೆಯೊಂದಿಗೆ ತಯಾರಿಸಲಾಗಿದೆ.

4. ಹಂತ ಹಂತವಾಗಿ ಮುಂದಿನ ಮೂರು ವರ್ಷಗಳ ಅವಧಿಯ ಸರ್ವಾಂಗೀಣ ಆಯವ್ಯಯ ಪ್ರಸ್ತಾವನೆಯನ್ನು ಕರ್ನಾಟಕ ಆರೋಗ್ಯ ಪದ್ಧತಿ ಮತ್ತು ಅಭಿವೃದ್ಧಿ ಯೋಜನೆಯೊಂದಿಗೆ ಸಮಾಲೋಚಿಸಿ ಸಿದ್ಧಪಡಿಸಲಾಗಿದೆ.

5. ಮೂತ್ರಪಿಂಡ ವೈಫಲ್ಯ ಪ್ರಕರಣಗಳಿಗೆ ಅತ್ಯಂತ ಪರಿಣಾಮಕಾರಿಯಾಗಿ ಚಿಕಿತ್ಸೆ ನೀಡಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೆಫ್ರೋ-ಯುರಾಲಜಿ ಸಂಸ್ಥೆಯನ್ನು ಸ್ಥಾಪಿಸಲು ಸರ್ಕಾರವು ನಿಶ್ಚಯಿಸಿದೆ.

(1) ಉದ್ದೇಶಿತ ಸಂಸ್ಥೆಯು ತಜ್ಞತಾ ಕೇಂದ್ರವಾಗಿದ್ದು ಚಿಕಿತ್ಸೆ ನೀಡುವುದಲ್ಲದೆ ನೆಫ್ರೋ ಯುರಾಲಜಿ ಕ್ಷೇತ್ರದಲ್ಲಿ ಸಂಶೋಧನಾ ಸೌಲಭ್ಯಗಳನ್ನು ಒದಗಿಸುವುದು.

(2) ವಿಕ್ಟೋರಿಯಾ ಆಸ್ಪತ್ರೆಯ ಆವರಣದಲ್ಲಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯು ತೆರವು ಮಾಡಿದ ಪ್ರದೇಶದಲ್ಲಿ ಉದ್ದೇಶಿತ ಸಂಸ್ಥೆಯು ಕಾರ್ಯಾಚರಣೆ ಮಾಡುವುದರಿಂದ ಯಾವುದೇ ಕಟ್ಟಡದ ಅನುದಾನವು ಲಭ್ಯವಾಗುವುದಿಲ್ಲ.

(3) ಉದ್ದೇಶಿತ ಸಂಸ್ಥೆಯಲ್ಲಿ ತಜ್ಞರ ಹುದ್ದೆಗಳನ್ನು ಹೊರತುಪಡಿಸಿ ಯಾವುದೇ ನೂತನ ಹುದ್ದೆಗಳನ್ನು ಸೃಜಿಸತಕ್ಕದ್ದಲ್ಲ. ಬೆಂಗಳೂರಿನ ಸರ್ಕಾರಿ ಆಸ್ಪತ್ರೆಗಳಲ್ಲಿ ಅಸ್ತಿತ್ವದಲ್ಲಿರುವ ನೆಫ್ರೋ ಯುರಾಲಜಿ ಘಟಕಗಳಲ್ಲಿನ ಎಲ್ಲಾ ಹುದ್ದೆಗಳನ್ನು ಪ್ರಸ್ತಾಪಿತ ಸಂಸ್ಥೆಯಲ್ಲಿ ವಿಲೀನಗೊಳಿಸಬೇಕು ಹಾಗೂ ಅಂತಹ ಆಸ್ಪತ್ರೆಗಳಲ್ಲಿ ಹೊರರೋಗಿಗಳ ಸೌಲಭ್ಯವನ್ನು ಉಳಿಸಿಕೊಳ್ಳಬೇಕು. ಅಷ್ಟರ ಮಟ್ಟಿಗೆ ಅಂತಹ ಆಸ್ಪತ್ರೆಗಳಲ್ಲಿನ ಸಂಬಳದ ಅನುದಾನವನ್ನು ಕಡಿತಗೊಳಿಸಿ ಪ್ರಸ್ತಾಪಿತ ಸಂಸ್ಥೆಗೆ ವರ್ಗಾಯಿಸತಕ್ಕದ್ದು. ವಿಲೀನದ ವ್ಯವಸ್ಥೆಯ ನಂತರವೂ ಸಿಬ್ಬಂದಿಯ ಅಗತ್ಯತೆಗೆ ಕೊರತೆಯಾದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮತ್ತು ವೈದ್ಯಕೀಯ ಶಿಕ್ಷಣ ಇಲಾಖೆಗಳಿಂದ

ಪಡೆಯುವ ಸಾಧ್ಯತೆಯನ್ನು ಪರಿಶೀಲಿಸತಕ್ಕದ್ದು. ವಿಲೀನದ ವ್ಯವಸ್ಥೆಯನ್ನು ಮೀರಿ ತಜ್ಞರ ಹುದ್ದೆಗಳ ಅಗತ್ಯತೆ ಇದ್ದಲ್ಲಿ ಅದನ್ನು ಪ್ರತ್ಯೇಕವಾಗಿ ನಿರ್ಧರಿಸಿ ಅಂತಹ ಹೆಚ್ಚುವರಿ ಹುದ್ದೆಗಳಿಗೆ ಸೀಮಿತಗೊಳಿಸಿ ಸಂಬಳ ಅನುದಾನವನ್ನು ನಿರ್ಭಂಧಿಸತಕ್ಕದ್ದು.

(4) ಉಪಕರಣ, ಪೀಠೋಪಕರಣ ಮತ್ತು ನವೀಕರಣಗಳ ವಾರ್ಷಿಕ ಅನುದಾನವನ್ನು (ಸಂಬಳದ ಅನುದಾನವನ್ನು ಹೊರತುಪಡಿಸಿ) ಮೂರು ವರ್ಷಗಳ ಅವಧಿಗೆ ಅದನ್ನು ಶೇ.50ಕ್ಕೆ ಸೀಮಿತಗೊಳಿಸಿ ಲೆಕ್ಕಾಚಾರ ಮಾಡತಕ್ಕದ್ದು ಹಾಗೂ ಇನ್ನುಳಿದ ಶೇ.50 ರಷ್ಟನ್ನು ದೇಣಿಗೆ ಮೂಲಕ ಪ್ರಸ್ತಾಪಿತ ಸಂಸ್ಥೆಯು ಕ್ರೋಢೀಕರಿಸಿಕೊಳ್ಳಬೇಕು.

(5) ಅನುಭೋಗ ಶುಲ್ಕವನ್ನು ವಿಧಿಸಿ ಸಂಸ್ಥೆಯು ಆಂತರಿಕ ಸಂಪನ್ಮೂಲಗಳನ್ನು ಗಳಿಸಿಕೊಂಡು ಮುಂದಿನ 5 ವರ್ಷಗಳ ಕಾರ್ಯಚರಣೆಯ ಅವಧಿಯಲ್ಲಿ ಸಂಸ್ಥೆಯು ಸ್ವಾವಲಂಬಿಯಾಗಬೇಕು.

(6) ಪ್ರಸ್ತಾಪಿತ ಸಂಸ್ಥೆಗೆ ಅಗತ್ಯವಾದ ಅನುದಾನವನ್ನು ವೈದ್ಯಕೀಯ ಶಿಕ್ಷಣ ಇಲಾಖೆಯ ವಾರ್ಷಿಕ ಯೋಜನೆಯ ಪರಿಮಿತಿಯಲ್ಲಿ ಒದಗಿಸತಕ್ಕದ್ದು.

6. ನೆಫ್ರೋ ಯುರಾಲಜಿ ಸಂಸ್ಥೆಯನ್ನು ಸ್ಥಾಪಿಸಲು ಮತ್ತು ಅದಕ್ಕೆ ಸ್ವಾಯತ್ತ ಸ್ಥಾನಮಾನ ನೀಡಲು ಸರ್ಕಾರವು ನಿರ್ಧರಿಸಿದೆ.

7. 2003-04ನೇ ಸಾಲಿನಲ್ಲಿ ಪ್ರಸ್ತುತ ಸಂಸ್ಥೆಯ ಸ್ಥಾಪನೆಗಾಗಿ ವಿವರವಾದ ವೆಚ್ಚದ ಅಂದಾಜಿನಲ್ಲಿ (ಸಂಪುಟ-IV) 2003-2004ರ ಯೋಜನಾ ಶೀರ್ಷಿಕೆಯಲ್ಲಿ 50 ಲಕ್ಷ ರೂಪಾಯಿಗಳ ಮೊತ್ತವನ್ನು ಒದಗಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 99 ಎಂಎಸ್‌ಎಫ್ 2003, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2003**

8. ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯ ಆವರಣದಲ್ಲಿ ಈ ಹಿಂದೆ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ಸ್ವಾಧೀನದಲ್ಲಿದ್ದ ಕಟ್ಟಡದಲ್ಲಿ ನೆಫ್ರೋ-ಯುರಾಲಜಿ ಸಂಸ್ಥೆಯನ್ನು ಪ್ರಸಕ್ತ 2003-04ನೇ ಸಾಲಿನಿಂದ ಜಾರಿಗೆ ಬರುವಂತೆ ಸ್ಥಾಪಿಸಲು ಈ ಮೂಲಕ ಮಂಜೂರಾತಿ ನೀಡಲಾಗಿದೆ.

9. ನೆಫ್ರೋ-ಯುರಾಲಜಿ ಸಂಸ್ಥೆಗೆ ಸ್ವಾಯತ್ತ ಸ್ಥಾನಮಾನ ನೀಡಲು ಅನುಕೂಲವಾಗುವಂತೆ ಅದನ್ನು 1960ರ ಕರ್ನಾಟಕ ಸಹಕಾರಿ ಸಂಘಗಳ ನೋಂದಣಿ ಅಧಿನಿಯಮದ 8ನೇ ಪ್ರಕರಣದಡಿ ನೋಂದಾಯಿಸತಕ್ಕದ್ದು.

10. ಸದರಿ ಸಂಸ್ಥೆಯ ಬೈಲಾಗಳನ್ನು ಸರ್ಕಾರದ ಅನುಮೋದನೆಗೆ ಸಲ್ಲಿಸತಕ್ಕದ್ದು.

11. ತಾರೀಖು 28-1-2003ರ ಸಂಖ್ಯೆ ಯೋಇ.118 ಜಶ 2002ರ ಅನಧಿಕೃತ ಟಿಪ್ಪಣಿಯಲ್ಲಿ ಯೋಜನಾ ಇಲಾಖೆಯ ಮತ್ತು 11-8-03ರ ಸಂಖ್ಯೆ ಎಫ್‌ಡಿ.1343 ವೆಚ್ಚ (5) 2003ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆದು ಈ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಸ್. ನಾಗರಾಜು

ಪಿ.ಆರ್. 1137

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

## ಕಾನೂನು ಸಚಿವಾಲಯ

**ವಿಷಯ:** ನ್ಯಾಯಾಂಗ ಇಲಾಖೆಯ ನೌಕರರಿಗಾಗಿ ಸ್ಥಾಪಿಸಲಾಗಿರುವ ತರಬೇತಿ ಸಂಸ್ಥೆಯನ್ನು ಅದರ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ-

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 46 ಎಲ್‌ಎಸಿ 89, ದಿನಾಂಕ:28-8-1992.
2. ಸರ್ಕಾರಿ ಆದೇಶ ಸಂಖ್ಯೆ: ಲಾ 222 ಎಲ್‌ಎಸಿ 2001, ದಿನಾಂಕ:22-9-2001.
3. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಎಲ್‌ಸಿಎ-1: 84:77 (ತರಬೇತಿ ಸಂಸ್ಥೆ) ದಿನಾಂಕ:29-4-2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:28-8-1992ರ ಸರ್ಕಾರಿ ಆದೇಶದಲ್ಲಿ, ನ್ಯಾಯಾಂಗ ಇಲಾಖೆಯ ನೌಕರರ ತರಬೇತಿ ಸಂಸ್ಥೆಯನ್ನು ಸಿಬ್ಬಂದಿಯೊಂದಿಗೆ ಸ್ಥಾಪಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಮತ್ತು ಸದರಿ ಸಂಸ್ಥೆಯ ಕಾರ್ಯಾವಧಿಯನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದ್ದು, ಮೇಲೆ ಓದಲಾದ (2)ರ ದಿನಾಂಕ:22-9-2001ರ ಸರ್ಕಾರಿ ಆದೇಶದನ್ವಯ ದಿನಾಂಕ:28-8-2003ಕ್ಕೆ ಪೂರ್ಣಗೊಳ್ಳುತ್ತದೆ.

ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಮೇಲೆ ಓದಲಾದ (3)ರ ದಿನಾಂಕ:29-4-2003ರ ಪತ್ರದಲ್ಲಿ ಸದರಿ ಸಂಸ್ಥೆಯನ್ನು ಕರ್ನಾಟಕ ಜುಡಿಷಿಯಲ್ ಅಕಾಡೆಮಿಯೊಂದಿಗೆ ವಿಲೀನಗೊಳಿಸುವಂತೆ ಅಥವಾ ಪರ್ಯಾಯವಾಗಿ ಎರಡು ವರ್ಷಗಳ ಅವಧಿಗೆ ದಿನಾಂಕ:28-8-2003 ರಿಂದ ಕಾರ್ಯಾವಧಿಯನ್ನು ಮುಂದುವರೆಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 119 ಎಲ್‌ಎಸಿ 2000, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003**

ನ್ಯಾಯಾಂಗ ಇಲಾಖೆಯ ಲಿಪಿಕ ವೃಂದದ ನೌಕರರಿಗೆ ತರಬೇತಿಯನ್ನು ನೀಡಲು ಸ್ಥಾಪಿಸಲಾಗಿರುವ ತರಬೇತಿ ಸಂಸ್ಥೆಯನ್ನು ಮಂಜೂರಾದ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:29-8-2003ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-800-4-00 ಯೋಜನೇತರ" ಇದರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10-7-1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1139

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ವಿಷಯ:** ಹರಿಹರ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯಕ್ಕೆ ಅಪರ ಸರ್ಕಾರಿ ವಕೀಲರ ನೇಮಕದ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಲಾ 51 ಎಲ್ಎಸಿ 2002, ದಿನಾಂಕ:25-6-2002.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:25-6-2002ರ ಸರ್ಕಾರಿ ಆದೇಶದಲ್ಲಿ ದಾವಣಗೆರೆ ಜಿಲ್ಲೆಯ ಹರಿಹರದಲ್ಲಿ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯವನ್ನು ಸ್ಥಾಪಿಸಲಾಗಿದ್ದು, ಅದರಂತೆ ಸದರಿ ನ್ಯಾಯಾಲಯ ದಿನಾಂಕ:4-8-2002 ರಿಂದ ಕಾರ್ಯನಿರ್ವಹಿಸುತ್ತಿದೆ. ಈ ನ್ಯಾಯಾಲಯದಲ್ಲಿ ಸಿವಿಲ್ ಪ್ರಕರಣಗಳನ್ನು ಸರ್ಕಾರದ ಪರವಾಗಿ ವಿಲೇ ಮಾಡಲು ಹರಿಹರ ತಾಲ್ಲೂಕಿಗೆ ಒಂದು ಅಪರ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 143 ಎಲ್ಎಜಿ 2002, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2003**

ಸರ್ಕಾರಿ ಆದೇಶ ಸಂ: ಲಾ 51 ಎಲ್‌ಸಿಇ 2002, ದಿನಾಂಕ:25-6-2002 ಹರಿಹರದಲ್ಲಿ ಹೊಸದಾಗಿ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯ ಸ್ಥಾಪಿಸಲಾಗಿದ್ದು, ಸರ್ಕಾರದ ಪರ ಇರುವ ಕೇಸುಗಳನ್ನು ನೋಡಿಕೊಳ್ಳಲು ಹರಿಹರ ತಾಲ್ಲೂಕಿಗೆ ಒಂದು ಅಪರ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 793 ವೆಚ್ಚ-7 2003, ದಿನಾಂಕ:11-7-2003ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1140

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ವಿಷಯ:** ದಾವಣಗೆರೆ ಜಿಲ್ಲೆಯ ಜಗಳೂರಿನ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ ಎಂ ಎಫ್ ಸಿ ನ್ಯಾಯಾಲಯಕ್ಕೆ ಮಂಜೂರಾದ 4 ಹೆಚ್ಚುವರಿ ಹುದ್ದೆಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ-

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಲಾ 124 ಎಲ್‌ಸಿಇ 93, ದಿನಾಂಕ:14-3-1996.
2. ಸರ್ಕಾರಿ ಆದೇಶ ಸಂಖ್ಯೆ: ಲಾ 179 ಎಲ್ಎಸಿ 2000, ದಿನಾಂಕ:27-12-2000.
3. ಸರ್ಕಾರಿ ಆದೇಶ ಸಂಖ್ಯೆ: ಲಾ 230 ಎಲ್ಎಸಿ 2002, ದಿನಾಂಕ:19-3-2003.
4. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಜಿಒಬಿ-2:238: 2002, ದಿನಾಂಕ:29-4-2003.

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆಯ ಜಗಳೂರಿನ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ ಎಂ ಎಫ್ ಸಿ ನ್ಯಾಯಾಲಯಕ್ಕೆ ಮೇಲೆ ಓದಲಾದ (1)ರ ದಿನಾಂಕ:14-3-1996ರ ಸರ್ಕಾರಿ ಆದೇಶದಲ್ಲಿ 4 ಹೆಚ್ಚುವರಿ ಹುದ್ದೆಗಳನ್ನು ಮಂಜೂರು ಮಾಡಲಾಗಿದ್ದು, ಸದರಿ ಹುದ್ದೆಗಳ ಕಾರ್ಯಾವಧಿಯನ್ನು ಕಾಲಕಾಲಕ್ಕೆ ಮುಂದುವರೆಸಲಾಗಿದ್ದು, ಮೇಲೆ ಓದಲಾದ (2)ರ ದಿನಾಂಕ:27-12-2000ರ ಸರ್ಕಾರಿ ಆದೇಶದನ್ವಯ ಅವುಗಳ ಕಾರ್ಯಾವಧಿಯು ದಿನಾಂಕ:21-1-2003ಕ್ಕೆ ಪೂರ್ಣಗೊಂಡಿವೆ.

ಮೂಲ ಆದೇಶದನ್ವಯ ಸದರಿ ನ್ಯಾಯಾಲಯಕ್ಕೆ ಮಂಜೂರಾದ ವಿವಿಧ 11 ಹುದ್ದೆಗಳೊಂದಿಗೆ ದಿನಾಂಕ:22-1-2003 ರಿಂದ 2 ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (3)ರ ದಿನಾಂಕ:19-3-2003ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್, ರವರು ಮೇಲೆ ಓದಲಾದ (4)ರ ದಿನಾಂಕ:29-4-2003ರ ಪತ್ರದಲ್ಲಿ ಸದರಿ ನ್ಯಾಯಾಲಯಕ್ಕೆ ಮಂಜೂರಾತಿ 4 ಹೆಚ್ಚುವರಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ:22-1-2003 ರಿಂದ ಮುಂದುವರಿಸಿಲ್ಲವಾದ್ದರಿಂದ ಏಕರೂಪ ಹುದ್ದೆಗಳ ಮಾದರಿಯಲ್ಲಿ ಮುಂದುವರೆಸಲು ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 106 ಎಲ್ಎಸಿ 2003, ಬೆಂಗಳೂರು, ದಿನಾಂಕ: 28ನೇ ಜುಲೈ 2003**

ಪ್ರಸ್ತಾವನೆಯನ್ನು ಪರಿಶೀಲಿಸಿ, ದಾವಣಗೆರೆ ಜಿಲ್ಲೆಯ ಜಗಳೂರಿನ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ ಎಂ ಎಫ್ ಸಿ ನ್ಯಾಯಾಲಯಕ್ಕೆ ಆದೇಶ ಸಂಖ್ಯೆ: ಲಾ 124 ಎಲ್‌ಸಿಇ 93 ದಿನಾಂಕ 14-3-1996ರಲ್ಲಿ ಸೃಜಿಸಲಾದ ಹಾಗೂ ಕಾಲಕಾಲಕ್ಕೆ ಮುಂದುವರೆಸಲಾದ 4 ಹೆಚ್ಚುವರಿ ಹುದ್ದೆಗಳನ್ನು ಸಹ ದಿನಾಂಕ:22-1-2003 ರಿಂದ 2 ವರ್ಷಗಳ ಅವಧಿಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01 ಯೋಜನೇತರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 807 ವೆಚ್ಚ-7:2003 ದಿನಾಂಕ:15-7-2003ರಲ್ಲಿ ನೀಡಿರುವ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1141

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ವಿಷಯ:** ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಕುಂದಾಪುರ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 163 ಎಲ್‌ಎಸಿ 2002, ದಿನಾಂಕ: 8-10-2002.
2. ಕರ್ನಾಟಕ ಉಚ್ಛ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್ ರವರ ಪತ್ರ ಸಂಖ್ಯೆ: ಜಿಒಬಿ-2-197:2003, ದಿನಾಂಕ:10-7-2003.

**ಪ್ರಸ್ತಾವನೆ:**

ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಕುಂದಾಪುರ ನ್ಯಾಯಾಲಯದ ಕಾರ್ಯಾವಧಿಯು ಮೇಲೆ (1) ರಲ್ಲಿ ಓದಲಾದ ದಿನಾಂಕ:8-10-2002ರ ಆದೇಶದಂತೆ ದಿನಾಂಕ:19-7-2003ಕ್ಕೆ ಪೂರ್ಣಗೊಳ್ಳುವುದರಿಂದ, ಸದರಿ ನ್ಯಾಯಾಲಯದಲ್ಲಿ ಬಹಳಷ್ಟು ಪ್ರಕರಣಗಳು ಬಾಕಿ ಇರುವುದರಿಂದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ:20-7-2003 ರಿಂದ 2 ವರ್ಷಗಳ ಅವಧಿಗೆ ಮುಂದುವರೆಸುವಂತೆ ಮೇಲೆ ಓದಲಾದ (2)ರ ದಿನಾಂಕ:10-7-2003 ರ ಪತ್ರದಲ್ಲಿ ಕರ್ನಾಟಕ ಉಚ್ಛ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 148 ಎಲ್‌ಎಸಿ 2003, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2003**

ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಕುಂದಾಪುರ ನ್ಯಾಯಾಲಯಕ್ಕೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳೊಂದಿಗೆ ನ್ಯಾಯಾಲಯದ ಕಾರ್ಯಾವಧಿಯನ್ನು ದಿನಾಂಕ:20-7-2003 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01" ಯೋಜನೇತರ ಇದರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10-7-1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1142 **ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಹುದ್ದೆ ಮತ್ತು ಆ ಹುದ್ದೆಯ ಪೂರಕ ಸಿಬ್ಬಂದಿಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 233 ಸೇಅಸೆ 99 ದಿನಾಂಕ: 7.5.99.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 521 ಸೇಅಸೆ 2001, ದಿನಾಂಕ: 4.10.2001.
3. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಕುಕ 245 ಎಂಎಸ್‌ಎಸ್ 2003, ದಿನಾಂಕ: 19.4.2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ಹುದ್ದೆಯನ್ನು ಹಾಗೂ ಆ ಹುದ್ದೆಗೆ ಪೂರಕವಾದ ಸಿಬ್ಬಂದಿಯ ಹುದ್ದೆಗಳನ್ನು 2 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲಾಗಿತ್ತು. ನಂತರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಈ ಹುದ್ದೆಯನ್ನು ಮತ್ತು ಆ ಹುದ್ದೆಗೆ ಮಂಜೂರಾದ ಎಲ್ಲಾ ಪೂರಕ ಸಿಬ್ಬಂದಿಯನ್ನು ದಿನಾಂಕ: 7.5.2001 ರಿಂದ ಪುನಃ 2 ವರ್ಷಗಳ ಕಾಲ ಮುಂದುವರೆಸಲಾಗಿತ್ತು. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಯುಕ್ತರ ಹುದ್ದೆ ಮತ್ತು ಪೂರಕ ಸಿಬ್ಬಂದಿಯನ್ನು ದಿನಾಂಕ: 7.5.2003 ರಿಂದ ಮುಂದಿನ ಎರಡು ವರ್ಷಗಳ ಅವಧಿಗೆ ವಿಸ್ತರಿಸಲು ಕೋರಿರುತ್ತದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 257 ಸೇಅಸೆ 2003, ಬೆಂಗಳೂರು, ದಿನಾಂಕ: 2ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ಹೇಳಿರುವ ಕಾರಣಗಳಿಂದ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಈ ಹುದ್ದೆಯನ್ನು ಮತ್ತು ಆ ಹುದ್ದೆಗೆ ಮಂಜೂರಾದ ಎಲ್ಲಾ ಪೂರಕ ಸಿಬ್ಬಂದಿಯನ್ನು ದಿನಾಂಕ: 7.5.2003 ರಿಂದ ಪುನಃ 2 ವರ್ಷಗಳ ಕಾಲ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿನ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ವಿ. ಕುಮಾರಸ್ವಾಮಿ**
ಪಿ.ಆರ್. 1145 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಕಂದಾಯ ಇಲಾಖೆಯ ಸರ್ಕಾರದ ಅಧೀನ ಕಾರ್ಯದರ್ಶಿ (ವಕ್ಫ್) ಹುದ್ದೆಯನ್ನು ರದ್ದುಪಡಿಸಿರುವ ಆದೇಶವನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 7 ಇಕಾಅ 98 ದಿನಾಂಕ:20.5.1999.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 97 ದಿನಾಂಕ:8.11.2002.
3. ಮಾನ್ಯ ಸಣ್ಣ ಕೈಗಾರಿಕೆ ಹಾಗೂ ಹಜ್ ಸಚಿವರ ಟಿಪ್ಪಣಿ ಸಂಖ್ಯೆ: ಎಂಎಸ್‌ಎಸ್ ಜೆಹೆಚ್ 697, ದಿನಾಂಕ: 12.8.2003.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಆರ್‌ಡಿ 124 ಪಿಆರ್‌ಎಸ್ 2003 ದಿನಾಂಕ: 25.8.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 20.5.1999ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಒಟ್ಟು ಹುದ್ದೆಗಳಲ್ಲಿ 400 ಹುದ್ದೆಗಳನ್ನು ರದ್ದುಗೊಳಿಸುವಂತೆ ಆದೇಶಿಸಲಾಗಿದ್ದು, ಈ ಆದೇಶದಂತೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 8.11.2002ರ ಸರ್ಕಾರದ ಆದೇಶದಲ್ಲಿ ಒಟ್ಟು 2 ಉಪ ಕಾರ್ಯದರ್ಶಿ ಹಾಗೂ 3 ಅಧೀನ ಕಾರ್ಯದರ್ಶಿ ಹುದ್ದೆಗಳನ್ನು ರದ್ದುಪಡಿಸಲಾಗಿರುತ್ತದೆ. ಇದರಲ್ಲಿ ಕಂದಾಯ ಇಲಾಖೆಯ ಅಧೀನ ಕಾರ್ಯದರ್ಶಿ (ವಕ್ಫ್) ಹುದ್ದೆಯು ಸೇರಿರುತ್ತದೆ.

ಆದರೆ ಕಂದಾಯ ಇಲಾಖೆಯ ಕಡತ ಸಂಖ್ಯೆ: ಆರ್‌ಡಿ 7 ಡಬ್ಲ್ಯೂಎಫ್‌ಡಬ್ಲ್ಯೂ 2003 ರಲ್ಲಿ ಕಳುಹಿಸಿರುವ ಪ್ರಸ್ತಾವನೆಯಲ್ಲಿ ಕಂದಾಯ ಇಲಾಖೆಯ ಅಧೀನ ಕಾರ್ಯದರ್ಶಿ (ವಕ್ಫ್) ಹುದ್ದೆಯನ್ನು ರದ್ದುಪಡಿಸಿ ಸದರಿ ಹುದ್ದೆಯನ್ನು ಅಧೀನ ಕಾರ್ಯದರ್ಶಿ (ಅಭಾವ ಪರಿಹಾರ) ಹುದ್ದೆಯೊಂದಿಗೆ ವಿಲೀನಗೊಳಿಸುವ ಪ್ರಸ್ತಾವನೆಗೆ ಒಪ್ಪದಿದ್ದ ಹಿನ್ನೆಲೆಯಲ್ಲಿ ಈ ಹುದ್ದೆಯ ರದ್ದತಿಗೆ ಬದಲಾಗಿ ಇಲಾಖೆಯ ಬೇರೊಂದು ಹುದ್ದೆಯನ್ನು ಕಡಿತಗೊಳಿಸಿ ಕೆಲಸದ ಸೂಕ್ತ ಮರು ಹಂಚಿಕೆ ಮಾಡುವ ಬಗ್ಗೆ ಪರಿಶೀಲಿಸಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಮಾಹಿತಿ ನೀಡುವಂತೆ ಕಂದಾಯ ಇಲಾಖೆಯನ್ನು ಕೋರಲಾಗಿದಿತು. ಈ ಮಧ್ಯೆ ಮಾನ್ಯ ಸಣ್ಣ ಕೈಗಾರಿಕೆ ಹಾಗೂ ಹಜ್ ಸಚಿವರು ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 12.8.2003ರ ಟಿಪ್ಪಣಿಯಲ್ಲಿ ಅಧೀನ ಕಾರ್ಯದರ್ಶಿ (ವಕ್ಫ್) ಹುದ್ದೆಯು ಕರ್ನಾಟಕ ರಾಜ್ಯದ ವಕ್ಫ್ ಸಂಸ್ಥೆಗಳ ಹಾಗೂ ಹಜ್ ಯಾತ್ರೆಗಳಿಗೆ ಸಂಬಂಧಿಸಿದ ವ್ಯವಹಾರಗಳನ್ನು ನಿರ್ವಹಿಸುವ ಜವಾಬ್ದಾರಿಯುತವಾದ ಹುದ್ದೆಯಾಗಿರುತ್ತದೆ. ಆದುದರಿಂದ ವಕ್ಫ್ ಸಂಸ್ಥೆಗಳ ಹಾಗೂ ಹಜ್ ಯಾತ್ರಾರ್ಥಿಗಳ ಹಿತದೃಷ್ಟಿಯಿಂದ ಅಧೀನ ಕಾರ್ಯದರ್ಶಿ (ವಕ್ಫ್) ಹುದ್ದೆಯನ್ನು ರದ್ದುಪಡಿಸಿರುವ ಆದೇಶವನ್ನು ವಾಪಸ್ ಪಡೆದು ಈ ಹುದ್ದೆಯನ್ನು ಮುಂದುವರೆಸುವಂತೆ ಕೋರಿರುತ್ತಾರೆ.

ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ: 25.8.2003ರ ಟಿಪ್ಪಣಿಯಲ್ಲಿ ಕಂದಾಯ ಇಲಾಖೆಯ ಅಧೀನ ಕಾರ್ಯದರ್ಶಿ (ವಕ್ಫ್) ಹುದ್ದೆಯ ರದ್ದತಿಗೆ ಬದಲಾಗಿ ಅಧೀನ ಕಾರ್ಯದರ್ಶಿ (ಭೂ ಸುಧಾರಣಾ ಕೋಶ) ಹುದ್ದೆಯನ್ನು ರದ್ದುಪಡಿಸಬಹುದೆಂದು ಈ ಹುದ್ದೆಯ ರದ್ದತಿಯಿಂದಾಗಿ ಈ ಹುದ್ದೆಯು ನಿರ್ವಹಿಸುತ್ತಿರುವ ಕಾರ್ಯಗಳನ್ನು ಅಧೀನ ಕಾರ್ಯದರ್ಶಿ (ಭೂ ಕಂದಾಯ) ಇವರಿಗೆ ವರ್ಗಾಯಿಸಲಾಗುವುದೆಂದು ತಿಳಿಸಿರುತ್ತಾರೆ.

ಆದುದರಿಂದ ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 2003, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2003**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಕಂದಾಯ ಇಲಾಖೆಯ ಅಧೀನ ಕಾರ್ಯದರ್ಶಿ (ವಕ್ಫ್) ಹುದ್ದೆಯನ್ನು ರದ್ದುಪಡಿಸಿ ಹೊರಡಿಸಿರುವ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 97, ದಿನಾಂಕ: 8.11.2002ನ್ನು ಮಾರ್ಪಡಿಸಿ ಈ ಹುದ್ದೆಯ ರದ್ದತಿಗೆ ಬದಲಾಗಿ ಕಂದಾಯ ಇಲಾಖೆಯ ಅಧೀನ ಕಾರ್ಯದರ್ಶಿ (ಭೂ ಸುಧಾರಣಾ ಕೋಶ) ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಅಧೀನ ಕಾರ್ಯದರ್ಶಿ (ಭೂ ಸುಧಾರಣಾ ಕೋಶ) ಹುದ್ದೆಯ ರದ್ದತಿಯಿಂದಾಗಿ ಈ ಹುದ್ದೆಯು ನಿರ್ವಹಿಸುತ್ತಿರುವ ಕಾರ್ಯಗಳನ್ನು ಅಧೀನ ಕಾರ್ಯದರ್ಶಿ (ಭೂ ಕಂದಾಯ) ಇವರಿಗೆ ಮರುಹಂಚಿಕೆ ಮಾಡುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಕಂದಾಯ ಇಲಾಖೆಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1143

## HEALTH AND FAMILY WELFARE SECRETARIAT

**Sub:** Admission of Kashmiri migrants in technical and professional institution.

**Read:**
1. Letter No.F-10-1/2001-Desk(U) dt. 11-6-2001 and 13-7-2001 of the Ministry of Human Resources Development Department of Secondary Education & Higher Education, New Delhi.
2. Letter No. U.12020/9/2002/ME(P-II) dt.30-10-2002 of the Ministry of Health & Family Welfare, Department of Health, New Delhi.
3. Government letter No.HFW 167 MPS 2001 dt. 22-12-2001 & 25-6-2003.
4. Proceedings of the meeting dt. 15-7-2003 under the chairmanship of Chief Minister, Government of Karnataka.

**PREAMBLE:**

1) In the letter dt. 11-6-2001 cited at reference (1) above, Government of India in the Ministry of Human Resources Department, Department of Secondary Education and Higher Education has made reference to permission of certain concession for the wards of Kashmiri migrants in the matter of their admission to the educational institution in other parts of the country. With regard to the procedure to be adopted for providing reservation of one seat to the Kashmiri migrants in technical/professional institution, it has been clarified as follows in the letter dt. 13-7-2001 cited at reference (1) above.

(1) In non-technical/non-professional programmes, reservation of supernumerary seats up-to a maximum of 5% of the total sanctioned seats may be made for Kashmiri migrants. Reservation applies both to U.G. and P.G. programmes.

(2) As regards admission in Technical/professional institutions, reservation of one seat is to be made in each institution and not in each course conducted by the institution.

(3) Each institution should, therefore, call for application from the Kashmiri migrants and there should not be any discrimination between the migrants settled locally and those coming from outstation in the matter of their admission in a particular institution.

(4) The reservation should be given to the most meritorious student amongst the applicants and he should be given admission to the course of his/her choice.

(5) In case there is no seat available in a certain course, an additional seat may be sanctioned on supernumerary basis to accommodate the choice of the concerned student.

2) Based on the above references, reference was made to the Ministry of Health & Family Welfare, Department of Health, Government of India in the letter dt. 22-12-2001 cited at reference (3) above with a request to agree for increase of intake over and above the intake approved to accommodate the migrant from Kashmir in medical and dental courses. In response to this, Government of India vide letter No.U.12020/9/2002-ME(P-II) dt. 30-10-2002 cited at reference (2) above has requested the State Government to send a proposal for this purpose in the existing medical colleges by way of application under Section 10(A) of the Indian Medical Council Act. It was further communicated that the Medical Council of India will inspect the premises for checking the infrastructure, staff, etc and accordingly recommended to the Central Government for approval or otherwise of the same. Similar provision exists in Dentists Act for increase of BDS seats in dental colleges.

3) After examining the communication received from Government, the State Government made a request to the Government of India to permit the State Government to accommodate Kashmiri migrants over and above the maximum of the intake in each of the Government medical colleges and dental college. It was also suggested to Government of India that Kashmiri migrants may be allotted one seat in each Government medical college under the All India Quota instead of their admission over and above the maximum of intake.

4) The matter has been further examined by the State Government to safeguard the interests of Kashmiri migrants. Keeping in view the proceedings of the meeting dt. 15.7.2003 cited at reference (4) above, it has been decided to reserve one seat in each Government medical college and Government dental College in the State to the wards of Kashmiri migrants and fill up these seats for the academic year 2003-2004. Such reservation of seats to be made over and above the maximum intake of seats in these colleges and pending approval of the Government of India, Medical Council of India and Dental Council of India for this proposal

**Government Order No. HFW 13 MPS 2003, Bangalore, Dated: 5th September 2003**

5) Government accords sanction for reservation of one seat each in Bangalore Medical College, Bangalore, Mysore Medical College, Mysore, Karnataka Institute of Medical Sciences, Hubli, Vijayanagar Institute of Medical Sciences, Bellary and Government Dental College, Bangalore in the State for providing admission to the wards of Kashmiri migrants during the academic year 2003-2004. The reservation made is subject to the following conditions.

(1) One seat in each of the four Government Medical Colleges and one Government Dental College is reserved for admission to the Wards of Kashmiri migrants during the academic year 2003-2004.

(2) Seats so reserved are over and above the maximum intake of seats fixed by Government of India for each of the four Government medical colleges and one Government Dental College in the state.

(3) The respective colleges shall submit application to Government of India/Medical Council of India/Dental Council of India to award sanction for such seats over and above the maximum intake of seats fixed for the respective colleges.

(4) Seats so reserved in the four Government medical colleges and one Government Dental college shall be filled up by admitting the eligible Wards of Kashmiri migrants during the academic year 2003-04.

(5) Selection of eligible candidates for this purpose shall be done by the CET Cell functioning under the Department of Education. The Cell shall invite applications from the wards of Kashmiri migrants, prepare the merit list of candidates and select eligible candidates in the order of merit and through counseling and allot them for admission to the respective colleges.

By Order and in the name of the Governor of Karnataka,

**S. NAGARAJU**

P.R. 1146

Under Secretary to Government,

Health & Family Welfare Department (Medical Education).

**FOREST, ECOLOGY AND ENVIRONMENT SECRETARIAT**

**Sub:** Renewal of mining lease No.909 over an area of 1452.74 ha. in favour of M/S Kudremukh Iron Ore Company Limited.

**Read:**
1. Letter No.A5(B1)MNG.CR.66/91-92 dt:24/25-5-1999 and 3-7-1999 of the Principal Chief Conservator of Forests Bangalore.
2. Government letter No. FEE 41 FFM 98 dt: 6-7-1999, 27-6-2000 and 19-7-2000.
3. Letter No.F8.69/99 FC dt: 16.7.1999, 25-7-2000, 20-7-2001 and 28-9-2001 of Government of India, Ministry of Environment and Forests, New Delhi.
4. G.O.No. FEE 41 FFM 98 dt: 4.8.2001 and 24.10.2001.
5. Government letter No.FEE 65 FFM 2001 dt: 18-10-2001
6. Letter No.F8.69/99 FC dated: 23-10-2002, 7-1-2003 and 30-1-2003 of Government of India, Ministry of Environment and Forests, New Delhi.

**PREAMBLE:**

The Principal Chief Conservator of Forests had sent a proposal to Government in his letter dt:24/25-5-1999 read at (1) above for renewal of mining lease No. 909 in favour of Kudremukh Iron Ore Company Limited as per rule 4 of Forest (Conservation) Act, 1980 for taking further action in the matter and was of the view that temporary working permission for a period of two years to continue in the mining operation may be considered in favour of Kudremukh Iron Ore Company Limited only in already broken up forest land of 1452.74 hectares and again in his letter dated 3-7-1999 read at (1) above has reiterated his earlier view.

In Government letter dt: 6-7-1999 read at (2) above, the following proposals were recommended to Government of India, Ministry of Environment and Forests, New Delhi for approval:

i) for renewal of lease of 1452.74 hectares of forest land which is already broken up in favour of M/s Kudremukh Iron Ore Company Limited for a period of 20 years with effect from 25.07.1999.

Further, Government of India vide their letter dt: 7-1-2003 read at (6) above has intimated that the proposal has been examined by the Advisory Committee Constituted by the Central Government under section 3 of the Forest (Conservation) Act, 1980. The Committee had discussed the proposal earlier in its meeting held on 11.07.2001 but no final decision on the proposal was taken due to the ongoing PIL in the Hon'ble Supreme Court i.e. IA No.670 in WP© No.202/1995. AS the Hon'ble Supreme Court has finally disposed off the PIL on 30.10.2002, the proposal was again placed before the Advisory Committee in its meeting held on 26.11.2002. The Committee took into account the crux of the orders which are as follows:-

(a) The Hon'ble Court did not find any reason to vary the majority view of the Forest Advisory Committee in its meeting held on 11.7.2001.

(b) In view of the recommendations of Forest Advisory Committee the Hon'ble Court has allowed mining only up to end of 2005 subject to fulfillment of the recommendations made by the Forest Advisory Committee on ecological and other aspects.

(c) The modalities for effecting the orders including transfer of building/infrastructure to Forest Department to be worked out by Ministry of Environment & Forests, State Government and Company under supervision and guidance and monitoring of the Forest Advisory Committee.

After careful consideration of the proposal of the State Government the order of the Hon'ble Supreme Court in the matter and on the basis of the recommendation of the Advisory Committee, the Central Government has conveyed its approval under Section-2 of the Forest (Conservation) Act, 1980 for renewal of mining lease No.909 over 1452.74 ha. of already broken up forest land in favour of M/s Kudremukh Iron Ore Company Limited in district Chickmagalur, subject to certain conditions.

The Government of India in its subsequent letter dated 30.1.2003 read at (6) above has re-examined the stipulated conditions. The condition 3(f) and 3(g) are standard conditions which are stipulated in all the mining cases in the instant proposal as the mining is going to cease within the next three years, these conditions may not serve much useful purpose. Therefore, Government of India has directed to delete those two conditions and similarly lease condition 3(e) is also modified to the following extent.

"3 (e) The State Government may initiate all necessary steps as are required in compliance to the orders/observations of the Hon'ble Supreme Court in their orders dated 30.10.2002."

The proposal has been examined in detail and the following orders are issued.

**Government Order No. FEE 41 FFM 1998, Bangalore, Dated: 4$^{th}$ September 2003**

After considering the various aspects of the proposal Government are pleased to accord its approval to the proposal under section 2 of the Forest (Conservation) Act, 1980 for renewal of mining lease No.909 over an area of 1452.74 ha. of already broken up forest land in favour of M/s Kudremukh Iron Ore Company Limited in Chickmagalur District subject to the following conditions:

1. Legal status of forest land shall remain unchanged.
2. The permission to mine and carry out allied activities under Forest (Conservation) Act, 1980 shall be up to 31.12.2005 only.
3. The user agency in consultation with the State Government will submit a complete mining closure plan inclusive of cessation of mining, reclamation plan of the mined out areas, post-cessation use/dismantling of the infrastructure etc. This should be submitted in due course of time for prior approval of the Central Government
4. A Committee consisting of Regional Chief Conservator of Forests, Government of India, Bangalore, Chief Wildlife Warden, Karnataka Shri J.P. Singh, Joint Secretary, Ministry of Steel and representative from Center for Ecological Sciences, Indian Institute of Science, Bangalore will monitor the project as well as the closure plan to be approved and suggest any mitigative measures from time to time.
5. The State Government shall initiate all necessary steps as are required in compliance to the orders/observations of the Hon'ble Supreme Court in their orders dated 30/10/2002.
6. All environmental safeguards shall be adhered to.
7. The approval under the Forest (Conservation) Act, 1980 is subject to the clearance under the Environmental Protection Act, 1986, if required.
8. Lessee/User agency shall pay to the forest department lease rent as per the provisions of Government Order No.FEE 69 FFM 96 dated 29.8.97. The Lessee shall also pay Rs.187.50 per ha. per year as supervision charges. Lessee shall also abide by the orders that may be issued by the State Government/Principal Chief Conservator of Forests from time to time revising these rates.
9. The lessee should open a Firewood Depot to the employees and laborers at the subsidized rates and the quantity to be prescribed by the Conservator of Forests/Deputy Conservator of Forests concerned.
10. The lessee should take up planting work on the static dumps during the advance mining operation.
11. The Mining company should undertake the afforestation measures in the area proposed for afforestation and also in other blank areas of the leased areas.
12. The Mining company should carry out soil and water conservation measures as suggested by the Forest Department.
13. The Mining Company should protect and nurture the natural growth in the area proposed for lease.
14. The lessee should under take to protect rigidly the leased area and also surrounding area up to one kilo-meter distance from the fire.
15. The lessee should not cut the trees without prior permission of the Forest Department and all produce of permitted fellings should be handed over to Forest Department under a cover of a Permit, Transportation of Ore should be strictly under transit Rule.
16. The lessee should execute the Agreement with the Department abiding usual conditions and terms including afforestation works necessitated for the safety of the Department.
17. In case of violation of agreement conditions of Forest Department the Forest Department has the right to suspend the work.

18. Any other condition that the State Government or the Chief Conservator of Forest (Central), Regional Office, Bangalore may impose from time to time in the interest of conservation, protection or development of forests.

By Order and in the name of the Governor of Karnataka,

**S.R. VATSALA**

P.R. 1147

Under Secretary to Government,

Forest, Ecology and Environment Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಮಲ್ಲೇಶಯ್ಯ, ಕೆಎಎಸ್ (ಕಿ.ಶ್ರೇ) ಅಧಿಕಾರಿ ಅವರ ವಿರುದ್ಧದ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 24 ಎಸ್‌ಇಎನ್ 03, ದಿನಾಂಕ:12-03-2003.
2. ನೋಟೀಸ್ ಕ್ರಮಾಂಕ:ಸಿಆಸುಇ 24 ಎಸ್‌ಇಎನ್ 2003, ದಿನಾಂಕ:24-4-2003.
3. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 72 ಆಸೇವ 2003, ದಿನಾಂಕ:28-6-2003.
4. ಶ್ರೀ ಮಲ್ಲೇಶಯ್ಯ, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ:6-6-2003.

**ಪ್ರಸ್ತಾವನೆ:**

ಬೀದರ್ ಉಪ ವಿಭಾಗಾಧಿಕಾರಿ ಹುದ್ದೆಗೆ ವರ್ಗಾಯಿಸಿ ನೇಮಿಸಿದ ಸರ್ಕಾರಿ ಆದೇಶವನ್ನುನುಸರಿಸಿ ಆ ಹುದ್ದೆಗೆ ಹಾಜರಾಗದೆ ಮಾನ್ಯ ತೋಟಗಾರಿಕಾ ಸಚಿವರ ಆಪ್ತ ಸಿಬ್ಬಂದಿ ಶಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ನೆಪಒಡ್ಡಿ ವರ್ಗಾವಣೆ ಆದೇಶ ಮಾರ್ಪಾಡಿಗೆ ಪ್ರಯತ್ನಿಸುವುದರ ಮೂಲಕ ದುರ್ನಡತೆ ಎಸಗಿದ ಆರೋಪಕ್ಕಾಗಿ ಶ್ರೀ ಮಲ್ಲೇಶಯ್ಯ ಕೆಎಎಸ್ ಅಧಿಕಾರಿ ಅವರನ್ನು ಅವರ ವಿರುದ್ಧದ ಇಲಾಖಾ ವಿಚಾರಣೆ ಬಾಕಿಇಟ್ಟು ಮೇಲೆ (1)ರಲ್ಲಿ ಓದಲಾದ ದಿನಾಂಕ:12-3-2003ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಡಲಾಯಿತು. ನಂತರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 12 ರನ್ವಯ ಮೇಲೆ (3)ರಲ್ಲಿ ಓದಲಾದ ದಿನಾಂಕ:24-4-2003ರ ನೋಟೀಸ್ ನೀಡುವುದರ ಮೂಲಕ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಅನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ:28-6-2003ರ ಅಧಿಸೂಚನೆಯಲ್ಲಿ ಅವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳಲಾಯಿತು. ಮೇಲೆ (4)ರಲ್ಲಿ ಓದಲಾದ ದಿನಾಂಕ: 6-6-2003ರ ಉತ್ತರ ಸಲ್ಲಿಸಿ ಸರ್ಕಾರವು ಮಾಡಲಾದ ವರ್ಗಾವಣೆ ಆದೇಶವನ್ನು ಗೌರವಿಸಿ ವರ್ಗಾಯಿಸಿದ ಸ್ಥಳಕ್ಕೆ ಹಾಜರಾಗುವುದಾಗಿ ತಿಳಿಸಿ ತಮ್ಮ ಮೇಲಿನ ಆರೋಪವನ್ನು ಕೈಬಿಡುವಂತೆ ಕೋರಿರುತ್ತಾರೆ. ಆರೋಪಿತ ಅಧಿಕಾರಿಯು ದಿನಾಂಕ:28-6-2003ರ ಅಧಿಸೂಚನೆಯಲ್ಲಿ ವರ್ಗಾಯಿಸಿ ನೇಮಿಸಲಾದ ಹುದ್ದೆಗೆ ಹಾಜರಾಗಿರುವುದರಿಂದ ಆರೋಪಿತ ಅಧಿಕಾರಿಯು ನೋಟೀಸಿಗೆ ನೀಡಿರುವ ಉತ್ತರದಲ್ಲೂ ಅದನ್ನು ಪ್ರಸ್ತಾಪಿಸಿರುವುದರಿಂದ ಅವರ ಉತ್ತರವನ್ನು ಹಾಗೂ ವರ್ಗಾಯಿಸಿದ ಸ್ಥಳಕ್ಕೆ ಹಾಜರಾಗಿರುವುದನ್ನು ಸರ್ಕಾರವು ಗಮನಿಸಿದೆ. ಈ ಹಿಂದೆಯೂ ಇವರು ವರ್ಗಾವಣೆ ಆದ ಜಾಗಕ್ಕೆ ಹೋಗುವುದನ್ನು ತಪ್ಪಿಸಿಕೊಳ್ಳಲು ಸಚಿವರ ಆಪ್ತ ಶಾಖೆಯಲ್ಲಿ ಉಳಿದಿದ್ದನ್ನು ಸರ್ಕಾರವು ಗಮನಿಸಿದೆ. ಈ ಎಲ್ಲಾ ಅಂಶಗಳನ್ನೂ ಪರಿಗಣಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 30ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ ನಿಯಮ 8 (II) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮಲ್ಲೇಶಯ್ಯ, ಕೆಎಎಸ್ (ಕಿ.ಶ್ರೇ) ಅಧಿಕಾರಿ ಅವರಿಗೆ ವಾಗ್ದಂಡನೆಯನ್ನು ವಿಧಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1148

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**FOREST, ECOLOGY AND ENVIRONMENT SECRETARIAT**

**Sub:** Diversion of 10.12 ha. of forest land for construction of 220 KVDC line from Varahi Generating Station to Hulical Limits-reg.

**Read:**
1. Letter No.A5(4)GFL.CR.13/02-03, dated 12.11.2002, 24/26.2.2003 and 11.6.2003 of Principal Chief Conservator of forests, Bangalore.
2. State Government letter No. FEE 351 FGL 2002, dated: 05.12.2002 and 27.3.2003.
3. Letter No.F©A/16.1/98/KAR/TL/406, dtd: 28.5.2003 and 4.7.03 of Chief Conservator of forests (Central), Government of India, Ministry of Environment and Forests, Regional Office (South Zone) Bangalore.

**PREAMBLE:**

The Principal Chief Conservator of Forests, Bangalore vide his letter dated 12.11.2002 read at (1) above has sent a proposal to State Government to obtain Government of India approval under Section 2 of Forest (Conservation) Act, 1980 for diversion of 16.10 ha. of forest land for construction of 220 KV DC

line from Varahi Generating Station to Hulical limits in favour of Karnataka Power Transmission Corporation limited.

Accordingly, the proposal was recommended to Government of India vide State Government letter dated 05.12.2002 read at (2) above for approval under Section 2 of Forest (Conservation) Act, 1980.

The State Advisory Group examined the proposal in the meeting held on 30.01.2003 and the committee took a decision to direct K.P.T.C.L to install 'V' strings in the Transmission line to be created newly to reduce the requirement of forest land resulting in felling less number of trees.

Accordingly, the KPTCL Authorities have reduced requirement of forest land from 16.10 ha. to 10.12. ha. This information furnished by the Principal Chief Conservator of Forests vide his letter dated 24/26.2.2003 read at (1) above was communicated to Government of India vide State Government letter dated 27.3.2003 read at (2) above.

Government of India, Ministry of Environment and Forests, Regional Office, (South Zone), Bangalore vide their letter dated 28.05.2003 read at (3) above has conveyed its approval in-principal (Stage-I) subject to fulfillment of certain conditions. Accordingly, the Principal Chief Conservator of Forests has submitted a compliance report directly to Government of India, Ministry of Environment and Forests, Regional Office (South Zone) Bangalore and also to State Government vide his letter dated 11.6.2003 read at (1) above.

Finally, Government of India, Ministry of Environment and Forests, Regional Office (South Zone), Bangalore vide their letter dated 04.07.2003 read at (3) above has conveyed its approval (Stage-II) under Section 2 of Forest (Conservation) Act, 1980 for diversion of 10.12 ha. of forest land i.e. 5.764 ha. of forest land in Sy. No. 7,9 and 10 of Nidagodu Village, Sagar Forest Division, Shimoga District and 4,356 ha. of forest land in Sy. No. 11 of Metakallgudda Village of Kundapur Forest Division, Udupi District for construction of 220 KV.DC line from Vahari Generating Station to Hilical Limits in favour of K.P.T.C.L subject to certain conditions.

The proposal has been examined in detail and hence the following orders are issued.

**Government Order No. FEE 351 FGL 2002, Bangalore, Dated: 2nd September 2003**

In the circumstances explained in the preamble, Government are pleased to accord approval under Section 2 of Forest (Conservation) Act, 1980 for diversion of 10.12 ha. of forest land i.e, 5.764 ha. of forest land in Sy.No.7,9 and 10 of Nidagodu Village, Sagar Forest Division, Shimoga District and 4.356 ha. of forest land in Sy.No. 11 of Metakallgudda Village of Kundapur Forest Division, Udupi District for construction of 220 KV DC line from Varahi Generating Station to Hulical Limits in favour of K.P.T.C.L. subject to the following conditions.

1. The legal status of forest land shall remain unchanged.
2. The compensatory afforestation shall be raised over 20.24 ha. of degraded forest land at the cost of user agency at the rate prevailing at the time of approval (Now it is Rs. 54,200.00 per ha).
3. The total forest area utilized for the above projects shall not exceed 10.12 ha.
4. The felling of trees in the forest area for the project shall be regulated in accordance with the instructions contained in the Annexure-V of the guidelines issued under the Act.
5. This shall be treated as a perpetual lease.
6. The leased area should be used only for the purpose for which it is granted. In case the land is not used for the stipulated purpose or when it no longer needed for the stipulated purpose the area should automatically revert back to the Forest Department.
7. The lessee has to pay the lease rent as fixed by the Government from time to time.
8. The cost of extraction of tree growth as calculated by the Forest Department shall be paid by the user agency.
9. The user agency should carry out the works with a specific condition that the power line will be atleast 7 mtrs. high with a safety net below. The posts are to be very strong concrete ones and the undergrowth will be regularly cleared.
10. Any other condition to be stipulated by Government of India/State Government/Principal Chief Conservator of Forests, Karnataka in the interest of conservation of forests.

By Order and in the name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

P.R. 1149

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ರಾಜಭಾಷಾ (ವಿಧಾಯೀ) ಆಯೋಗದ ಕಾಲಾವಧಿಯನ್ನು ವಿಸ್ತರಿಸಿ ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 4 ಎಲ್ಎಂಪಿ 97, ದಿನಾಂಕ:04.07.1997.
2. ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 01 ಎಲ್ಎಂಪಿ 99, ದಿನಾಂಕ:05.06.1999.
3. ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 01 ಎಲ್ಎಂಪಿ 2000, ದಿನಾಂಕ:12.04.2001.
4. ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 10 ಭಾನಿವಿ 2002, ದಿನಾಂಕ:22.4.2002.
5. ಪತ್ರ ಸಂಖ್ಯೆ:ಭಾನಿ 7: ಆಡಳಿತ/ಆಯೋಗ 2003, ದಿ:24.3.2003.
6. ಶ್ರೀ ಆರ್.ನಾವೂರ್‌ಕರ್, ನಿವೃತ್ತ ಉಪನಿರ್ದೇಶಕರ ಪತ್ರ ದಿನಾಂಕ:2.6.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಕಾಲಾವಧಿಯನ್ನು 31ನೇ ಜನವರಿ 1999ರ ತನಕ ವಿಸ್ತರಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಾಲಾವಧಿಯನ್ನು 1ನೇ ಫೆಬ್ರವರಿ 1999ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗದ ಕಾಲಾವಧಿಯನ್ನು ದಿ:30.5.2001ರವರೆಗೆ ಮುಂದುವರಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗದ ಕಾಲಾವಧಿಯನ್ನು ದಿ:30.5.2003ರವರೆಗೆ ಮುಂದುವರಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಭಾಷಾಂತರ ನಿರ್ದೇಶಕರು ಸದರಿ ಆಯೋಗದ ಅವಧಿಯನ್ನು 31.5.2003ರಿಂದ ಮೂರು ವರ್ಷಗಳ ಕಾಲ ಮುಂದುವರಿಸುವಂತೆ ಕೋರಿದ್ದಾರೆ.

ಮೇಲೆ (6)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಆರ್. ನಾವೂರ್‌ಕರ್, ನಿವೃತ್ತ ಉಪನಿರ್ದೇಶಕರು ತಮ್ಮನ್ನು ರಾಜ ಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷ/ಸದಸ್ಯರನ್ನಾಗಿ ನೇಮಿಸುವಂತೆ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 18 ಭಾನಿವಿ 2003, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2003**

ಭಾಷಾಂತರ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಅಸ್ತಿತ್ವದಲ್ಲಿರುವ ರಾಜ ಭಾಷಾ (ವಿಧಾಯೀ) ಆಯೋಗವನ್ನು ದಿನಾಂಕ: 31.05.2003ರಿಂದ 31-08-2003 ರವರೆಗೆ ವಿಸ್ತರಿಸಲಾಗಿದೆ. ದಿನಾಂಕ: 01-09-2003ರಿಂದ ಪ್ರಸ್ತುತ ಅಧ್ಯಕ್ಷರನ್ನು ಹೊರತುಪಡಿಸಿ ಉಳಿದ ಸದಸ್ಯರನ್ನು ಮುಂದುವರಿಸಿ, ಆಯೋಗಕ್ಕೆ ಅಧ್ಯಕ್ಷರು ಹಾಗೂ ಸದಸ್ಯರನ್ನು ಈ ಕೆಳಕಂಡಂತೆ ನಾಮಕರಣ ಮಾಡಿ ತಕ್ಷಣದಿಂದ ಜಾರಿಗೆ ಬರುವಂತೆ 30-05-2006 ರವರೆಗೆ ಆಯೋಗವನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಆರ್. ನಾವೂರ್‌ಕರ್<br>ನಿವೃತ್ತ ಭಾಷಾಂತರ ಉಪ ನಿರ್ದೇಶಕರು<br>ನಂ. 514, ಬಿ 4 ಶರಾವತಿ ನ್ಯಾಷನಲ್ ಗೇಮ್ಸ್ ಹೌಸಿಂಗ್ ಕಾಂಪ್ಲೆಕ್ಸ್,<br>ಬೆಂಗಳೂರು-.560 047. | ಅಧ್ಯಕ್ಷರು |
| 2. | ಶ್ರೀ ವೈ.ಎಂ.ದೊಡಮನಿ<br>ನಿವೃತ್ತ ಉಪ ನಿರ್ದೇಶಕರು<br>ಸಾರ್ವಜನಿಕ ಶಿಕ್ಷಣ ಇಲಾಖೆ<br>ನಂ.248, ಪಶ್ಚಿಮ ಕಾಡ್ ರಸ್ತೆ, 2ನೇ ಹಂತ,<br>ಮಹಾಲಕ್ಷ್ಮಿಪುರಂ, ಬೆಂಗಳೂರು-560 086 | ಸದಸ್ಯರು |
| 3. | ಶ್ರೀ ಪಾಂಡುರಂಗ ನಾಯಕ್<br>ವಕೀಲರು<br>ನಂ.30:66, ಲಕ್ಷ್ಮೀ ನಿಲಯ, 4ನೇ ಅಡ್ಡರಸ್ತೆ, ಈಜು ಕೊಳದ ಬಡಾವಣೆ,<br>ಮಲ್ಲೇಶ್ವರಂ, ಬೆಂಗಳೂರು-3. | ಸದಸ್ಯರು |
| 4. | ಶ್ರೀ ಬಿ.ಜಿ.ರಾಜಶೇಖರ್,<br>ವಕೀಲರು<br>4:2, ಮಿಲ್ಲರ್ ರಸ್ತೆ, ಬೆಂಗಳೂರು-1. | ಸದಸ್ಯರು |
| 5. | ಶ್ರೀ ಟಿ.ಆರ್. ಮಹದೇವಯ್ಯ<br>ನಂ.378, ಗ್ರಾಮ ದೇವತಾ ಗುಡಿ ಬೀದಿ,<br>ಮಂಜುನಾಥನಗರ ಕಾರ್ಡ್ ರಸ್ತೆ, ಬೆಂಗಳೂರು-10 | ಸದಸ್ಯರು |

ಈ ಅವಧಿಯಲ್ಲಿ ಆಯೋಗದ ಅಧ್ಯಕ್ಷರು ಮತ್ತು ಸರ್ಕಾರೇತರ ಸದಸ್ಯರುಗಳ ಸೇವಾ ಷರತ್ತುಗಳು ಪ್ರಸ್ತುತ ಜಾರಿಯಲ್ಲಿರುವ ಆದೇಶಗಳಿಗೆ ಒಳಪಟ್ಟಿರುತ್ತದೆ. ಶ್ರೀ. ಆರ್. ನಾವೂರ್‌ಕರ್, ಅಧ್ಯಕ್ಷರು, ಇವರ ಸೇವಾವಧಿಯು ಈ ಆಜ್ಞೆ ಹೊರಡಿಸಿದ ದಿನಾಂಕದಿಂದ 30.5.2006ರವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇರುತ್ತದೆ.

ಈ ಆಯೋಗಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052-ಸಚಿವಾಲಯ-ಸಾಮಾನ್ಯ ಸೇವೆ-092-08-ಭಾಷಾಂತರ ನಿರ್ದೇಶಕರು-ರಾಜಭಾಷಾ (ವಿಧಾಯೀ) ಆಯೋಗ-(ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಅದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 863 ವೆಚ್ಚ-7:2003, ದಿನಾಂಕ:08.08.2003ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮ.ರಾ. ಹೆಗಡೆ**

ಪಿ.ಆರ್. 1150

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಆರ್. ವೆಂಕಟೇಶ್ ತಹಶೀಲ್ದಾರ್ ಇವರನ್ನು ಅಮಾನತ್ತಿನಿಂದ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ದಿನಾಂಕ:23-5-03ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 65 ಎಡಿಇ 2002.

**ಪ್ರಸ್ತಾವನೆ:**

ಶ್ರೀ ಆರ್. ವೆಂಕಟೇಶ್, ಹಿಂದಿನ ಕಛೇರಿ ಸಹಾಯಕರು ಹಾಗೂ ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಚಿತ್ರದುರ್ಗ ಜಿಲ್ಲೆ ಇವರು ಚಿತ್ರದುರ್ಗ ನಗರದಲ್ಲಿ ಆಶ್ರಯ ಯೋಜನೆಯಡಿಯಲ್ಲಿ ಸ.ನಂ.:33:7ರಲ್ಲಿ 10 ಎಕರೆ ಜಮೀನನ್ನು ಖರೀದಿ ಮಾಡದಿದ್ದರು ಸಹ ಸದರಿ ಜಮೀನನ್ನು ಖರೀದಿ ಮಾಡಿರುವುದಾಗಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಅದರ ಬಗ್ಗೆ 11.00 ಲಕ್ಷ ರೂ.ಗಳನ್ನು ಪಾವತಿ ಮಾಡಿರುವುದಾಗಿ ಹಾಗೂ ಇಂತಹ ಅಕೃತ್ಯದ ಬಗ್ಗೆ ಚಿತ್ರದುರ್ಗ ನಗರದ ಆರಕ್ಷಕ ಠಾಣೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರು, ರಾಜೀವಗಾಂಧೀ ಗ್ರಾಮೀಣ ವಸತಿ ನಿಗಮ ನಿಯಮಿತ ಇವರ ನಿರ್ದೇಶನದ ಮೇರೆಗೆ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲು ಮಾಡಿದ್ದು, ಸದರಿ ಮೊಕದ್ದಮೆಯ ತನಿಖೆ ಪ್ರಾರಂಭವಾಗಿರುವುದರಿಂದ ಅದಕ್ಕೆ ಸಂಬಂಧಪಟ್ಟ ಸಾಕ್ಷ್ಯಾಧಾರಗಳು ಹಾಗೂ ದಾಖಲಾತಿಗಳು ಸುರಕ್ಷಿತವಾಗಿರುವ ದೃಷ್ಟಿಯಿಂದ ಮತ್ತು ಶ್ರೀ ಆರ್. ವೆಂಕಟೇಶ್ ರವರು ಚಿತ್ರದುರ್ಗ ಪುರಸಭಾ ತಹಶೀಲ್ದಾರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಜಿಲ್ಲೆಯ ನಗರಸಭೆ ಹಾಗೂ ಪುರಸಭೆಗಳ ಎಲ್ಲಾ ಅವ್ಯವಹಾರಗಳಿಗೆ ಪರೋಕ್ಷವಾಗಿ ಪೂರ್ಣ ಹೊಣೆಗಾರರಾಗಿರುವುದಾಗಿ ಹಾಗೂ ಸರ್ಕಾರದ ವತಿಯಿಂದ ಪಹಣಿಗಳನ್ನು ನೀಡು "ಭೂಮಿ" ಕಾರ್ಯಕ್ರಮದಲ್ಲಿ ಸದರಿ ಆಪಾದಿತರು ನೋಡೆಲ್ ಅಧಿಕಾರಿಯಾಗಿದ್ದರಿಂದ, ಆ ಬಗ್ಗೆ ಯಾವುದೇ ಕೆಲಸವನ್ನು ಪೂರ್ಣವಾಗಿ ಹಾಗೂ ಜವಾಬ್ದಾರಿಯುತವಾಗಿ ನಿರ್ವಹಿಸದೇ ಚಿತ್ರದುರ್ಗ ಜಿಲ್ಲೆಯಲ್ಲಿ "ಭೂಮಿ" ಕಾರ್ಯಕ್ರಮವು ಕುಂಠಿತವಾಗಲು ನೇರ ಹೊಣೆಗಾರರಾಗಿರುತ್ತಾರೆ ಎಂಬ ಆಪಾದನೆಗಳ ಮೇರೆಗೆ ಶ್ರೀ ಆರ್. ವೆಂಕಟೇಶ್ ರವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿಯಿಟ್ಟು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಸದರಿ ಅಮಾನತ್ತಿನ ಆದೇಶವನ್ನು ಪುನರ್ ಪರಿಶೀಲಿಸಿದ ಸರ್ಕಾರವು ಸದರಿ ಆಪಾದಿತರನ್ನು ಅಮಾನತ್ತಿನಲ್ಲಿ ಮುಂದುವರಿಸುವ ಅಗತ್ಯವಿಲ್ಲವೆಂದು ಮನಗಂಡು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಅಮಾನತ್ತಿನಿಂದ ಬಿಡುಗಡೆ ಮಾಡಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 65 ಎಡಿಇ 2002, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್. ವೆಂಕಟೇಶ್, ಗುಂಪು-ಬಿ ತಹಶೀಲ್ದಾರ್ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆಗೊಳಿಸಿ ಹಾಸನ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಖಾಲಿಯಿರುವ ಪುರಸಭಾ ತಹಶೀಲ್ದಾರ್ ಹುದ್ದೆಗೆ ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1151

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಬದರಿನಾಥ್, ತಹಶೀಲ್ದಾರ್ ಇವರನ್ನು ಅಮಾನತ್ತಿನಿಂದ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ದಿನಾಂಕ:18-9-02ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 46 ಎಡಿಇ 2001.

2. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿನ ಅರ್ಜಿ ಸಂಖ್ಯೆ:15640:2002ರ ಮೇಲೆ ಆಡಳಿತ ನ್ಯಾಯ ಮಂಡಳಿಯ ದಿನಾಂಕ:16-6-2003ರ ತೀರ್ಪು.

**ಪ್ರಸ್ತಾವನೆ:**

ಶ್ರೀ ಬದರೀನಾಥ್ ರವರು ಹಿಂದೆ ನಂಜನಗೂಡು ತಹಶೀಲ್ದಾರ್‌ರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸದರಿ ತಾಲ್ಲೂಕಿನ ಛತ್ರ ಹೋಬಳಿ ಕುರಹಟ್ಟಿ ಗ್ರಾಮದ ಸ.ನಂ.1ರಲ್ಲಿ 74.24 ಎಕರೆ ಜಮೀನನ್ನು ಶ್ರೀ ಎ. ತಿಲಕರಾಂ ಎಂಬುವವರು 1961ರ ಕರ್ನಾಟಕ ಭೂ ಸುಧಾರಣಾ ಕಾಯಿದೆ ಕಲಂ 79-ಎ ಮತ್ತು ಬಿ ಯನ್ನು ಉಲ್ಲಂಘನೆ ಮಾಡಿ ಖರೀದಿಸಿದ್ದರೂ ಸಹ ಖರೀದಿದಾರರಿಗೆ ಖಾತೆ ಮಾಡಲು ಆದೇಶ ನೀಡಿ ಅಧಿಕಾರ ದುರುಪಯೋಗ ಮಾಡಿರುತ್ತಾರೆಂದು, ಸದರಿ ತಾಲ್ಲೂಕಿನ ದೊಡ್ಡ ಕೌಲಂದೆ ಹೋಬಳಿಯಲ್ಲಿ ಭೂ ಸುಧಾರಣಾ ಕಾಯಿದೆ ಅನ್ವಯ ಅಧಿಭೋಗದಾರರನ್ನಾಗಿ ನೋಂದಾಯಿಸಿರುವ ಜಮೀನಿಗೆ ಹಿಡುವಳಿ ಜಮೀನೆಂದು ಭೂ ವಿಜ್ಞಾನ ಇಲಾಖೆಗೆ ವರದಿ ಮಾಡಿರುವುದಾಗಿ, ನಂಜನಗೂಡು ಕಸಬಾ ಸ.ನಂ. 1325ರ ಚಿಕ್ಕ ಇನಾಂ ಜಮೀನನ್ನು ದಿನಾಂಕ:4-11-1997ರ ಸರ್ಕಾರಿ ಸುತ್ತೋಲೆ

ಅನ್ವಯ ತಹಶೀಲ್ದಾರ್‌ರಿಗೆ ಅಧಿಕಾರವಿಲ್ಲದಿದ್ದರೂ ಸಹ ಪುನರ್ ಮಂಜೂರಾತಿ ನೀಡಿರುವುದಾಗಿ, ಸದರಿ ತಾಲ್ಲೂಕಿನ ಹೆಡತಲೆ ಗ್ರಾಮದ 6-00 ಎಕರೆ ಭಾಗಾಯಿತು ಜಮೀನಿಗೆ ಗ್ರಾಮ ಲೆಕ್ಕಿಗರು ಖುಷ್ಕಿ ಜಮೀನೆಂದು ಆರ್.ಟಿ.ಸಿ. ನೀಡಿದ ವಿಚಾರದಲ್ಲಿ ಅವರ ವಿರುದ್ಧ ಶಿಸ್ತಿನ ಕ್ರಮ ಬಾಕಿಯಿದ್ದರೂ ಸಹ ಖರೀದಿದಾರರ ಹೆಸರಿಗೆ ಖಾತೆ ಮಾಡಲು ಶ್ರೀ ಬದರೀನಾಥ್ ಆದೇಶ ಹೊರಡಿಸಿ ನೋಂದಣಿ ಶುಲ್ಕದ ಮೂಲಕ ಸರ್ಕಾರಕ್ಕೆ ಅಧಿಕ ನಷ್ಟ ಉಂಟಾಗಲು ಕಾರಣರಾಗಿರುವುದಾಗಿ, ಸದರಿ ತಾಲ್ಲೂಕಿನ ದೊಡ್ಡಕೌಲಂದೆ ಹೋಬಳಿ ಹರಗನಪುರ ಗ್ರಾಮದ ಸ.ನಂ.119ರ ಸರ್ಕಾರಿ ಜಮೀನಿಗೆ ಸೇರಿದಂತೆ ಒಂದು ಜನಾಂಗದ ಸ್ಮಶಾನಕ್ಕಾಗಿ ಇನ್ನು ಒಂದು ಜನಾಂಗದಿಂದ ತಪ್ಪು ಮಾಹಿತಿ ನೀಡಿ ಅನಾವಶ್ಯಕ ಗಲಭೆಗೆ ಪ್ರಚೋದನೆ ನೀಡುವಲ್ಲಿ ಕಾರಣರಾಗಿರುತ್ತಾರೆಂದು, ನಂಜನಗೂಡು ಪುರಸಭೆ ಅಧ್ಯಕ್ಷರು:ಉಪಾಧ್ಯಕ್ಷರ ಚುನಾವಣೆ ಸಂಬಂಧ ದಿನಾಂಕ:9-9-98 ರಂದು ನಡೆದ ಸಭೆಯಲ್ಲಿ ಜವಾಬ್ದಾರಿಯುತ ಕೆಲಸ ನಿರ್ವಹಿಸದೇ ಚುನಾವಣೆ ಮುಂದೂಡಿ ಶಾಂತಿಭಂಗ ಉಂಟಾಗಲು ಕಾರಣರಾಗಿರುತ್ತಾರೆಂದು, ಸದರಿ ತಾಲ್ಲೂಕಿನ ಉಪ್ಪಾರಹುಂಡಿ ಗ್ರಾಮದವರಿಗೆ ದೇವಸ್ಥಾನ ಕಟ್ಟುವ ಬಗ್ಗೆ ದಿನಾಂಕ:13-11-98 ರಂದು ಭೂಸ್ವಾಧೀನ ಪಡಿಸಿಕೊಳ್ಳಲು ಶಿಫಾರಸ್ಸು ಮಾಡಿ ಪುನಃ ದಿನಾಂಕ:20-11-1998ರಂದು ದೇವಸ್ಥಾನ ಕಟ್ಟಬಾರದೆಂದು ಆದೇಶಿಸಿ ಗ್ರಾಮದಲ್ಲಿ ಶಾಂತಿಭಂಗವನ್ನುಂಟು ಮಾಡಲು ಕಾರಣರಾಗಿರುತ್ತಾರೆಂದು ಸದರಿ ತಾಲ್ಲೂಕಿಗೆ ಸಂಬಂಧಿಸಿದ 1961ರ ಇನಾಂ ರದ್ದಿಯಾತಿ ಕಾಯಿದೆಯಂತೆ ಚಿಕ್ಕ ಇನಾಂ ಜಮೀನುಗಳನ್ನು ಗುರುತಿಸಿ ಚಿಕ್ಕ ವಂಶಸ್ಥರಿಗೆ ಮರು ಮಂಜೂರಾತಿಗೆ ಬಾಕಿಇಲ್ಲವೆಂದು ದಿನಾಂಕ:13-1-99 ರಂದು ವರದಿ ಮಾಡಿ ನಂತರ ದಿನಾಂಕ:27-1-1999 ರಂದು ಸದರಿ ಜಮೀನುಗಳ ಮರು ಮಂಜೂರಾತಿಗೆ ಮತ್ತೆ ಕಡತ ಸಲ್ಲಿಸಿ ಮೇಲಾಧಿಕಾರಿಗಳಿಗೆ ತಪ್ಪು ವರದಿ ನೀಡಿರುತ್ತಾರೆಂದು ಹಾಗೂ ಮೈಸೂರು ಉಪ ವಿಭಾಗಾಧಿಕಾರಿಗಳು ದಿನಾಂಕ:10-3-1999 ರಂದು ನಂಜನಗೂಡು ತಾಲ್ಲೂಕು ಪ್ರವಾಸ ಕಾರ್ಯಕ್ರಮದ ಬಗ್ಗೆ ತಿಳಿಸಿದ್ದರೂ ಸಹ ಸದರಿ ದಿನಾಂಕದಂದು ಶ್ರೀ ಬದರೀನಾಥ್ ರವರು ಸೇವೆಗೆ ಗೈರು ಹಾಜರಾಗಿ ಸರ್ಕಾರಿ ಹಾಗೂ ಸಾರ್ವಜನಿಕ ಕಾರ್ಯಗಳಿಗೆ ಅಡ್ಡಿ ಉಂಟು ಮಾಡಿರುತ್ತಾರೆಂದು, ಅಲ್ಲದೆ ಶ್ರೀ ಬದರೀನಾಥ್ ರವರು ಮಳವಳ್ಳಿ ತಾಲ್ಲೂಕು ತಹಶೀಲ್ದಾರ್‌ರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸದರಿ ತಾಲ್ಲೂಕಿನ ಹಲಗೂರು ಗ್ರಾಮದ ಸ.ನಂ.2 ಜಮೀನಿನಲ್ಲಿ ಅತಿಕ್ರಮಣಮಾಡಿ ಕಟ್ಟಡ ಕಟ್ಟಿರುವ ಬಗ್ಗೆ ಹಿಂದಿನ ತಾಲ್ಲೂಕು ತಹಶೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿದ್ದವರು ನೀಡಿದ ನೋಟೀಸನ್ನು ಹಿಂದಕ್ಕೆ ಪಡೆದಿರುವುದಲ್ಲದೆ, ಕರ್ನಾಟಕ ಉಚ್ಛ ನ್ಯಾಯಾಲಯದ ಆದೇಶವನ್ನು ಸಹ ಉಲ್ಲಂಘಿಸಿ ಸರ್ಕಾರದ ಹಿತಾಸಕ್ತಿಗೆ ವಿರುದ್ಧವಾಗಿ ನಡೆದುಕೊಂಡು ಕರ್ತವ್ಯಲೋಪ ಎಸಗಿರುತ್ತಾರೆ ಎಂಬ ಆರೋಪಗಳ ಮೇರೆಗೆ ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿಯಿಟ್ಟು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಬದರೀನಾಥ್ ರವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಸದರಿ ಅಮಾನತ್ತಿನ ಆದೇಶವನ್ನು ಪ್ರಶ್ನಿಸಿ ಶ್ರೀ ಬದರೀನಾಥ್‌ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಹೂಡಿದ್ದ ಅರ್ಜಿ ಸಂಖ್ಯೆ:15640:2002ರ ಮೇಲೆ ಆಡಳಿತ ನ್ಯಾಯ ಮಂಡಳಿಯು ತನ್ನ ದಿನಾಂಕ:16-6-2003ರ ತೀರ್ಪಿನಲ್ಲಿ ಶ್ರೀ ಬದರೀನಾಥ್ ರವರು ತಮ್ಮನ್ನು ನಿಲಂಬನೆಯಿಂದ ಮುಕ್ತಗೊಳಿಸಿ ಸೇವೆಗೆ ಪುನರ್ ನೇಮಿಸುವಂತೆ ಸರ್ಕಾರವನ್ನು ಕೋರಿ ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ಅವರ ಅಮಾನತ್ತು ಆದೇಶವನ್ನು ರದ್ದುಗೊಳಿಸುವ ಬಗ್ಗೆ ಸೂಕ್ತ ಆದೇಶವನ್ನು ಹೊರಡಿಸುವಂತೆ ಸದರಿ ಆಡಳಿತ ನ್ಯಾಯ ಮಂಡಳಿಯ ತೀರ್ಪನ್ನು ಸ್ವೀಕರಿಸಿದ ದಿನಾಂಕದಿಂದ 30 ದಿನಗಳೊಳಗೆ ಕ್ರಮ ಕೈಗೊಳ್ಳುವಂತೆ ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ತೀರ್ಪಿನಲ್ಲಿ ತಿಳಿಸಿರುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಸದರಿ ಅಧಿಕಾರಿಯನ್ನು ಅಮಾನತ್ತಿನಲ್ಲಿ ಮುಂದುವರಿಸುವ ಅಗತ್ಯವಿಲ್ಲವೆಂದು ಮನಗಂಡು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಅಮಾನತ್ತಿನಿಂದ ಬಿಡುಗಡೆ ಮಾಡಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 46 ಎಡಿಇ 2001, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬದರೀನಾಥ್, ತಹಶೀಲ್ದಾರ್ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಅವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಲಾಗಿದೆ.

ಇವರಿಗೆ ನೇಮಕಾತಿ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1152

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ನಾಗರಾಜಪ್ಪ ಹೊನ್ನಾಳ, ತಹಶೀಲ್ದಾರ್, ಬ್ಯಾಡಗಿ ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯ ಪ್ರತಿಕೂಲ ಷರಾದ ಬಗ್ಗೆ.

**ಓದಲಾಗಿದೆ:**
1. ದಿನಾಂಕ:5-2-03ರ ಬೆಳಗಾವಿ ವಿಭಾಗಾಧಿಕಾರಿಯವರ ಪತ್ರದ ಸಂ:ಕಂಶಾ:ಡಿವಿಸಿ:ಅಸ:97:02-03, ದಿನಾಂಕ:5-2-03.
2. ಶ್ರೀ ನಾಗರಾಜಪ್ಪ ಹೊನ್ನಾಳ, ತಹಶೀಲ್ದಾರ್, ಬ್ಯಾಡಗಿ ಇವರ ದಿನಾಂಕ:27-12-02ರ ಮನವಿ.
3. ಸರ್ಕಾರಿ ಪತ್ರ ಸಂ.ಆರ್‌ಡಿ 53 ಎಎಸ್‌ಡಿ 03, ದಿನಾಂಕ:29-5-03.
4. ಹಾವೇರಿ ಉಪ ವಿಭಾಗಾಧಿಕಾರಿಯವರ ಪತ್ರದ ಸಂ:ಸಿಬ್ಬಂದಿ:ವಹಿ:20:2003-04, ದಿನಾಂಕ:17-6-2003.

**ಪ್ರಸ್ತಾವನೆ:**

ಈ ಮೇಲೆ ಓದಲಾದ ಕ್ರಮ ಸಂಖ್ಯೆ:(1)ರ ಪತ್ರದ ಮೂಲಕ ವಿಭಾಗಾಧಿಕಾರಿಗಳು, ಬೆಳಗಾಂ, ವಿಭಾಗ, ಬೆಳಗಾಂ ಇವರು ಶ್ರೀ ನಾಗರಾಜಪ್ಪ ಹೊನ್ನಾಳ, ತಹಶೀಲ್ದಾರ್, ಬ್ಯಾಡಗಿ ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ವರದಿ

ಮಾಡುವ ಪ್ರಾಧಿಕಾರಿ ಮಾಡಿರುವ ಪ್ರತಿಕೂಲ ಷರಾವನ್ನು ಸದರಿ ತಹಶೀಲ್ದಾರ್‌ರಿಗೆ ಜಾರಿ ಮಾಡಿರುವ ಬಗ್ಗೆ ತಿಳಿಸಿರುತ್ತಾರೆ.

ಈ ಮೇರೆಗೆ ಓದಲಾದ (2)ರ ದಿನಾಂಕ:27-12-02ರ ಮನವಿಯಲ್ಲಿ ಶ್ರೀ ನಾಗರಾಜಪ್ಪ ಹೊನ್ನಾಳ, ತಹಶೀಲ್ದಾರ್ ಇವರು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ, 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ನಮೂದಾಗಿರುವ ಪ್ರತಿಕೂಲ ಷರಾಗಳ ಬಗ್ಗೆ ವಿವರಣೆ ನೀಡಿ, ತಮ್ಮ ಮೇಲೆ ಮಾಡಲಾದ ವ್ಯತಿರಿಕ್ತ ಷರಾಗಳನ್ನು ತಾವು ಒಪ್ಪುವುದಿಲ್ಲವೆಂದು ಮತ್ತು ಅವುಗಳನ್ನು ತೊಡೆದು ಹಾಕುವಂತೆ ಕೋರಿದ್ದಾರೆ.

ಶ್ರೀ ನಾಗರಾಜಪ್ಪ ಹೊನ್ನಾಳ, ತಹಶೀಲ್ದಾರ್, ಬ್ಯಾಡಗಿ ಇವರ ಮನವಿಯನ್ನು ವರದಿ ಮಾಡುವ ಪ್ರಾಧಿಕಾರಿಯಾದ ಹಾವೇರಿ ಉಪ ವಿಭಾಗಾಧಿಕಾರಿಯವರಿಗೆ ಕಳುಹಿಸಿ, ಈ ಬಗ್ಗೆ ಅವರ ನಿಲುವು:ಅಭಿಪ್ರಾಯ ನೀಡುವಂತೆ ಕೋರಲಾಗಿತ್ತು. ಈ ಮೇರೆಗೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಹಾವೇರಿ ಉಪ ವಿಭಾಗಾಧಿಕಾರಿಗಳು, ಶ್ರೀ ನಾಗರಾಜಪ್ಪ ಹೊನ್ನಾಳ ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ಬರೆದಿರುವ ಎಲ್ಲ ಪ್ರತಿಕೂಲ ಷರಾಗಳನ್ನು ವಿವೇಚನೆಯಿಂದ ಹಾಗೂ ಸದರಿ ತಹಶೀಲ್ದಾರ್‌ರ ಕಾರ್ಯವೈಖರಿಯನ್ನು ಗಮನಿಸಿಯೇ ಮಾಡಿದ್ದು ಅದನ್ನು ದೃಢೀಕರಿಸಿರುತ್ತೇವೆಂದು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ವರದಿ ಮಾಡುವ ಪ್ರಾಧಿಕಾರಿಯ ಅಭಿಪ್ರಾಯವನ್ನು ಪರಿಗಣಿಸಿ ಶ್ರೀ ನಾಗರಾಜಪ್ಪ ಹೊನ್ನಾಳ್, ತಹಶೀಲ್ದಾರ್, ಬ್ಯಾಡಗಿ, ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಿಸಿರುವ ಪ್ರತಿಕೂಲ ಷರಾವನ್ನು ಹಾಗೆಯೇ ಉಳಿಸಿಕೊಳ್ಳಲು ತೀರ್ಮಾನಿಸಿರುವುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 53 ಎಎಸ್‌ಡಿ 03, ಬೆಂಗಳೂರು, ದಿನಾಂಕ: 2ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿ) ನಿಯಮಾವಳಿಗಳು 2000ದ ನಿಯಮ 10(2)ರಲ್ಲಿ ವಿಹಿತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ನಾಗರಾಜಪ್ಪ ಹೊನ್ನಾಳ್, ತಹಶೀಲ್ದಾರ್, ಬ್ಯಾಡಗಿ, ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಿಸಿರುವ ಪ್ರತಿಕೂಲ ಷರಾವನ್ನು ಹಾಗೆಯೇ ಉಳಿಸಲು ಈ ಮೂಲಕ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1153

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಬಿ.ಎಸ್. ಶಂಭುಗೌಡ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತಿ) ಬೀದರ್ ಹಾಗೂ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಕುರಿತು.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಪಿಡಿಎಸ್ 90:96-97, ದಿನಾಂಕ:17-7-1997.
2. ತಿಳುವಳಿಕೆ ಪತ್ರ ಸಂಖ್ಯೆ:ಆರ್‌ಡಿ 103 ಎಡಿಇ 97, ದಿನಾಂಕ:20-12-1997 ಮತ್ತು 28-3-1998.
3. ಲಿಖಿತ ಹೇಳಿಕೆ: ಶ್ರೀ ಮಹಾದೇವಯ್ಯ, ದಿನಾಂಕ:28-5-1998.
   ಶ್ರೀ ಚಿಂತಾಮಣಿ, ದಿನಾಂಕ:28-5-1998.
   ಶ್ರೀ ಜಹೀರ್‌ಖಾನ್, ದಿನಾಂಕ:28-5-1998.
4. ಸರ್ಕಾರಿ ಆದೇಶ ಸಂಖ್ಯೆ:ಕಂಇ 103 ಎಡಿಇ 97, ದಿನಾಂಕ:4-7-2000.
5. ಮೈಸೂರು ಜಿಲ್ಲಾಧಿಕಾರಿಗಳ ದಿನಾಂಕ:18-8-2000ರ ಪತ್ರ ಸಂಖ್ಯೆ:ಇಎಸ್‌ಟಿ(2)ಸಿಆರ್ 29:2000-01.
6. ದಿನಾಂಕ:24-1-01ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 103 ಎಡಿಇ 97.
7. ಹಿಂದಿನ ಮೈಸೂರು ವಿಭಾಗಾಧಿಕಾರಿಗಳು, ಮೈಸೂರು ಇವರ ದಿನಾಂಕ:7-10-02ರ ಪತ್ರ ಸಂಖ್ಯೆ:ಸಿಬ್ಬಂದಿ(6) ಸಿಆರ್ 253:2000-01.

**ಪ್ರಸ್ತಾವನೆ:**

ಮೈಸೂರು ಜಿಲ್ಲೆ, ಗುಂಡ್ಲುಪೇಟೆ ತಾಲ್ಲೂಕಿನ ಟಿಎಪಿಸಿಎಂಎಸ್‌ನಲ್ಲಿ ಸಾರ್ವಜನಿಕ ವಿತರಣಾ ಪದ್ಧತಿ, ಮಧ್ಯಾಹ್ನದ ಉಪಹಾರ ಹಾಗೂ ಜೆ ಆರ್ ವೈ ಯೋಜನೆಯಡಿಯಲ್ಲಿ ನಡೆದಿರುವ ಹಣದುರುಪಯೋಗದಲ್ಲಿ ಭಾಗಿಯಾಗಿದ್ದಾರೆಂಬ ಆರೋಪಕ್ಕೆ ಒಳಗಾಗಿರುವ ಅಂದು ಕಾರ್ಯ ನಿರ್ವಹಿಸುತ್ತಿದ್ದ ಕಂದಾಯ ಇಲಾಖೆಯ ಹಾಗೂ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖಾ ನೌಕರರಾದ ಈ ಕೆಳಕಂಡ ಅಧಿಕಾರಿ:ನೌಕರರುಗಳ ವಿರುದ್ಧ ಅವರವರ ಕರ್ತವ್ಯಲೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಇವರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ:17-7-97ರ ಪತ್ರದಲ್ಲಿ ಆರೋಪ ಪಟ್ಟಿಗಳೊಡನೆ ಪ್ರಸ್ತಾವನೆ ಸಲ್ಲಿಸಿದ್ದರು.

1) ಶ್ರೀ ಬಿ.ಎಸ್. ಶಂಭುಗೌಡ, ಹಿಂದಿನ ತಹಶೀಲ್ದಾರರು, ಗುಂಡ್ಲುಪೇಟೆ.
2) ಶ್ರೀ ಬಿ.ಎನ್. ರಾಮಚಂದ್ರರಾವ್, ಹಿಂದಿನ ಶಿರಸ್ತೇದಾರ್, ಗುಂಡ್ಲುಪೇಟೆ.
3) ಶ್ರೀ ಬಾಲಕೃಷ್ಣ, ಹಿಂದಿನ ಶಿರಸ್ತೇದಾರ್, ಗುಂಡ್ಲುಪೇಟೆ.
4) ಶ್ರೀ ಮಹಾದೇವಯ್ಯ, ಹಿಂದಿನ ಆಹಾರ ನಿರೀಕ್ಷಕರು, ಗುಂಡ್ಲುಪೇಟೆ.
5) ಶ್ರೀ ಚಿಂತಾಮಣಿ, ಹಿಂದಿನ ಆಹಾರ ನಿರೀಕ್ಷಕರು, ಗುಂಡ್ಲುಪೇಟೆ.
6) ಶ್ರೀ ಜಹೀರ್ ಖಾನ್, ಹಿಂದಿನ ಆಹಾರ ನಿರೀಕ್ಷಕರು, ಗುಂಡ್ಲುಪೇಟೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ

ನಿಯಮ 13 ರಡಿಯಲ್ಲಿ ಮೇಲ್ಕಂಡ ಆರೋಪಗಳ ಬಗ್ಗೆ ಅವರ ವಿರುದ್ಧದ ಆರೋಪ ಪಟ್ಟಿಗಳನ್ನು ಅವರುಗಳಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ:20-12-97 ಮತ್ತು 28-3-98 ರನ್ವಯ ತಿಳುವಳಿಕೆ ಪತ್ರ ನೀಡಲಾಗಿತ್ತು. ಮೇಲ್ಕಂಡ ಆರೋಪಿಗಳ ಪೈಕಿ ಶ್ರೀಯುತರುಗಳಾದ ಮಹಾದೇವಯ್ಯ, ಚಿಂತಾಮಣಿ ಮತ್ತು ಜಹೀರ್ ಖಾನ್ ರವರು ಕ್ರಮಾಂಕ(3)ರಲ್ಲಿ ಓದಲಾದ ದಿನಾಂಕಗಳಂದು ಸಲ್ಲಿಸಿರುವ ಉತ್ತರಗಳಲ್ಲಿ ತಮ್ಮ ವಿರುದ್ಧದ ಆರೋಪಗಳನ್ನು ಒಪ್ಪಿಕೊಂಡಿರುವುದಿಲ್ಲ. ಶ್ರೀ ಬಿ.ಎಸ್. ಶಂಭುಗೌಡ, ಶ್ರೀ ಬಿ.ಎಸ್. ರಾಮಚಂದ್ರರಾವ್ ಮತ್ತು ಶ್ರೀ ಬಾಲಕೃಷ್ಣ ಇವರುಗಳು ದಾಖಲೆಗಳನ್ನು ನೋಡಲು ಬಯಸಿದ್ದಾಗ್ಯೂ ಸರ್ಕಾರದ ಮುಂದೆ ಈವರೆವಿಗೆ ಹಾಜರಾಗಿ ದಾಖಲೆಗಳನ್ನು ನೋಡಿಕೊಂಡು ಉತ್ತರಗಳನ್ನು ಸಲ್ಲಿಸಲು ಆಸಕ್ತಿ ವಹಿಸಿರುವುದಿಲ್ಲ. ಸಮಜಾಯಿಸಿ ಸಲ್ಲಿಸಿರುವ ಆಪಾದಿತರುಗಳ ಲಿಖಿತ ಸಮಜಾಯಿಷಿಯನ್ನು ಪರಿಶೀಲಿಸಲಾಗಿ ಅವುಗಳು ಸಮರ್ಪಕವಾಗಿರುವುದಿಲ್ಲ ಹಾಗೂ ಲಿಖಿತ ಸಮಜಾಯಿಷಿ ಸಲ್ಲಿಸದೆ ಇರುವ ಆರೋಪಿಗಳಿಗೆ ಸಂಬಂಧಿಸಿದಂತೆ EXPARTI ತೀರ್ಮಾನ ತೆಗೆದುಕೊಂಡು, ಮೇಲ್ಕಂಡ ಆರೋಪಿಗಳು ಕರ್ತವ್ಯಲೋಪ ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬರುತ್ತದೆ. ಆದುದರಿಂದ ಅವರುಗಳ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಜಂಟಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ:4-7-2000ದ ಸರ್ಕಾರಿ ಆದೇಶ ಸಂಖ್ಯೆ:ಕಂಇ 103 ಎಡಿಇ 97 ರಲ್ಲಿ ಮೈಸೂರು ಜಿಲ್ಲಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಮೈಸೂರು ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ದಿನಾಂಕ:18-8-2000ರ ಪತ್ರದಲ್ಲಿ ಮೈಸೂರು ಜಿಲ್ಲಾಧಿಕಾರಿಗಳು ಈ ಪ್ರಕರಣವನ್ನು ಅವರೇ ತನಿಖೆ ಮಾಡಿ ಅನುಬಂಧ 1 ರಿಂದ 4ರ ವರೆಗಿನ ದೋಷಾರೋಪಣೆ ಪಟ್ಟಿಗಳನ್ನು ತಯಾರಿಸಿರುವುದರಿಂದ ಪುನಃ ಮೈಸೂರು ಜಿಲ್ಲಾಧಿಕಾರಿಗಳೇ ವಿಚಾರಣೆ ನಡೆಸಿ, ವರದಿ ಸಲ್ಲಿಸಿದಲ್ಲಿ ಆರೋಪಿ ನೌಕರರು ಈ ಬಗ್ಗೆ ಆಕ್ಷೇಪ ಸಲ್ಲಿಸುವ ಸಾಧ್ಯತೆಯಿರುವುದರಿಂದ ಹಾಗೂ ವಿಚಾರಣೆಯ ಬಗ್ಗೆ ಖಚಿತ ಅಭಿಪ್ರಾಯ ನೀಡಲು ಸಾಧ್ಯವಿಲ್ಲದಿರುವುದರಿಂದ ಈ ಪ್ರಕರಣವನ್ನು ವಿಭಾಗಾಧಿಕಾರಿಗಳ ರಾಜ್ಯ ಪತ್ರಾಂಕಿತ ಸಹಾಯಕರಿಗೆ ವಹಿಸುವಂತೆ ಕೋರಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರವು ಮೇಲೆ ಕ್ರಮ ಸಂಖ್ಯೆ:(6)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೈಸೂರು ವಿಭಾಗಾಧಿಕಾರಿಗಳ ರಾಜ್ಯ ಪತ್ರಾಂಕಿತ ಸಹಾಯಕರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ. ಆದರೆ ಸದರಿ ವಿಚಾರಣೆಯನ್ನು ಜರುಗಿಸಲು ಸಂಬಂಧಪಟ್ಟ ದಾಖಲೆಗಳನ್ನು ಹಾಜರುಪಡಿಸುವಲ್ಲಿ ಆಹಾರ ಇಲಾಖೆಯ ಅಧಿಕಾರಿಗಳು ವಿಳಂಬ ಮಾಡಿರುವುದರಿಂದ ಈ ಪ್ರಕರಣದ ವಿಚಾರಣೆ ಪ್ರಕ್ರಿಯೆಯಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸಲಾಗಿರುವುದಿಲ್ಲವೆಂದು ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಪತ್ರದಲ್ಲಿ ಹಿಂದಿನ ಮೈಸೂರು ವಿಭಾಗಾಧಿಕಾರಿಯವರು ವರದಿ ಮಾಡಿರುತ್ತಾರೆ. ಅಲ್ಲದೆ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದ್ದ ಮೈಸೂರು ವಿಭಾಗಾಧಿಕಾರಿಯವರ ಹಿಂದಿನ ರಾಜ್ಯ ಪತ್ರಾಂಕಿತ ಸಹಾಯಕರು ವರ್ಗಾವಣೆಗೊಂಡಿದ್ದು ಅವರ ಸ್ಥಾನದಲ್ಲಿ ರಾಜ್ಯ ಪತ್ರಾಂಕಿತ ಸಹಾಯಕರಾಗಿ ಪ್ರಭಾರ ವಹಿಸಿಕೊಂಡಿರುವ ಶ್ರೀ ಕೆ. ತಮ್ಮಯ್ಯ ಎಂಬುವವರು ಈ ಪ್ರಕರಣದಲ್ಲಿ ಸಾಕ್ಷಿದಾರರಲ್ಲಿ ಒಬ್ಬರಾಗಿರುವುದರಿಂದ ಅವರೂ ಸಹ ವಿಚಾರಣಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಸಾಧ್ಯವಿರುವುದಿಲ್ಲವೆಂದು, ಆದುದರಿಂದ ಈ ಬಗ್ಗೆ ಹೊರಡಿಸಿರುವ ಮೇಲೆ ಕ್ರಮ ಸಂಖ್ಯೆ(6)ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಉಪಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಮೈಸೂರು ಜಿಲ್ಲೆ, ಇವರನ್ನು ವಿಚಾರಣಾಧಿಕಾರಿಯಾಗಿ ನೇಮಕ ಮಾಡುವಂತೆ ಕೋರಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಕಾನೂನು ಇಲಾಖೆಯು ಗುರುತಿಸಿರುವ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರೊಬ್ಬರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 103 ಎಡಿಇ 97, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಈ ಕೆಳಕಂಡ ಅಧಿಕಾರಿ:ನೌಕರರ ವಿರುದ್ಧ ಅವರುಗಳ ವಿರುದ್ಧದ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಆರ್.ಎಲ್.ಅಗ್ನಿಹೋತ್ರಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ನಂ.102, ಎ.ವಿ.ಕ್ರಾಸ್, ಕಾಳಿದಾಸ ಲೇಔಟ್, ರಾಘವೇಂದ್ರಸ್ವಾಮಿ ಮಠದ ಹತ್ತಿರ, ಶ್ರೀನಗರ, ಬೆಂಗಳೂರು-50 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

1) ಶ್ರೀ ಬಿ.ಎಸ್. ಶಂಭುಗೌಡ, ಹಿಂದಿನ ತಹಶೀಲ್ದಾರರು, ಗುಂಡ್ಲುಪೇಟೆ.
2) ಶ್ರೀ ಬಿ.ಎನ್. ರಾಮಚಂದ್ರರಾವ್, ಹಿಂದಿನ ಶಿರಸ್ತೇದಾರ್, ಗುಂಡ್ಲುಪೇಟೆ.
3) ಶ್ರೀ ಬಾಲಕೃಷ್ಣ, ಹಿಂದಿನ ಶಿರಸ್ತೇದಾರ್, ಗುಂಡ್ಲುಪೇಟೆ.
4) ಶ್ರೀ ಮಹಾದೇವಯ್ಯ, ಹಿಂದಿನ ಆಹಾರ ನಿರೀಕ್ಷಕರು, ಗುಂಡ್ಲುಪೇಟೆ.
5) ಶ್ರೀ ಚಿಂತಾಮಣಿ, ಹಿಂದಿನ ಆಹಾರ ನಿರೀಕ್ಷಕರು, ಗುಂಡ್ಲುಪೇಟೆ.
6) ಶ್ರೀ ಜಹೀರ್ ಖಾನ್, ಹಿಂದಿನ ಆಹಾರ ನಿರೀಕ್ಷಕರು, ಗುಂಡ್ಲುಪೇಟೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿ ಮುಂದೆ ಮಂಡಿಸಲು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೈಸೂರು ಜಿಲ್ಲಾಧಿಕಾರಿಯವರ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ:

ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000-(ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-02ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಮೈಸೂರು ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು 2 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಹಿಂದೆ ಸದರಿ ಪ್ರಕರಣದಲ್ಲಿ ಹಿಂದಿನ ಮೈಸೂರು ವಿಭಾಗಾಧಿಕಾರಿಗಳ ರಾಜ್ಯ ಪತ್ರಾಂಕಿತ ಸಹಾಯಕರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ ದಿನಾಂಕ:24-1-01ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 103 ಎಡಿಇ 97ನ್ನು ಈ ಮೂಲಕ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1154

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಶ್ರೀ ಹೆಚ್.ಎಲ್. ವೆಂಕಟೇಶ್, ಪದವೀಧರ ಇಂಜಿನಿಯರ್ (ಎಂ.ಆರ್.ಇ) ಇವರು ದಿನಾಂಕ 25.11.1999ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.9.94.
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ:357:ಪಿಡಬ್ಲ್ಯುಸಿ:90 ದಿನಾಂಕ: 2.12.94.
3. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ:11:ಪಿಡಬ್ಲ್ಯುಸಿ:96 ದಿನಾಂಕ: 2.9.98.
4. ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯುಡಿ:119:ಪಿಡಬ್ಲ್ಯುಸಿ:99 ದಿನಾಂಕ: 8.12.99.
5. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿಎಸ್-142:ಇಎಸ್‌ಎಂ:ದಿನೌಸೇ:2002-03: ದಿ:11.3.2002.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಛ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸಿ.ಆ.ಸು. ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ: 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ:29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ: 29.9.94 ಹಾಗೂ ಪಿಡಬ್ಲ್ಯುಡಿ 36:ಪಿಡಬ್ಲ್ಯುಸಿ 97 ದಿನಾಂಕ: 16.6.97ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

### ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಲೋಇ 25 ಪಿಡಬ್ಲ್ಯುಸಿ 2003, ಬೆಂಗಳೂರು, ದಿನಾಂಕ: 28ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ: 1.7.84ರ ನಂತರ ಹಾಗೂ

15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ-ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.9.94 ಹಾಗೂ ಪಿಡಬ್ಲ್ಯುಡಿ:119:ಪಿಡಬ್ಲ್ಯುಸಿ:99 ದಿನಾಂಕ 8.12.99ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರ. ಸಂ. | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ಹೆಚ್.ಎಲ್. ವೆಂಕಟೇಶ್, ಪದವೀಧರ ಇಂಜಿನಿಯರ್ | 26.11.1989 | 25.11.1999 | 26.11.1999 | ಲೋಇ ಉಪ ವಿಭಾಗ, ಕನಕಪುರ. |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ನೀಡಲು ಪರಿಗಣಿಸುವುದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1156

**ಎನ್.ವೈ. ಸಾಗರ್**

ಪೀಠಾಧಿಕಾರಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ)

## ಸಹಕಾರ ಸಚಿವಾಲಯ

**ವಿಷಯ:** "ವಿಫಲಬಾವಿ ಪರಿಹಾರ ಧನ" ಯೋಜನೆಯಲ್ಲಿ ಬಾಕಿ ಉಳಿದ ಸಾಲಗಳು ಮತ್ತು ಬಡ್ಡಿ ಹಣವನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:** ಸಚಿವ ಸಂಪುಟದ ತೀರ್ಮಾನ ಸಂಖ್ಯೆ: ಸಿ.276, ದಿನಾಂಕ:28.8.2003.

**ಪ್ರಸ್ತಾವನೆ:**

ಹಾಲಿ ಜಾರಿಯಲ್ಲಿರುವ ವಿಫಲಬಾವಿ ಪರಿಹಾರ ಧನ ಯೋಜನೆಯಡಿಯಲ್ಲಿ ಸರ್ಕಾರವು ಅಸಲನ್ನು ಭರಿಸುತ್ತಿದ್ದು ಬಡ್ಡಿ ಹಣವನ್ನು ನಬಾರ್ಡ್ ಮತ್ತು ಕಾಸ್ಕಾರ್ಡ್ ಬ್ಯಾಂಕುಗಳು ಕ್ರಮವಾಗಿ ಶೇಕಡಾ 50:50 ಪ್ರಮಾಣದಲ್ಲಿ ಭರಿಸುತ್ತಲಿತ್ತು, ಆದರೆ, ಇತ್ತೀಚಿನ ವರ್ಷಗಳಲ್ಲಿ ನಬಾರ್ಡ್ ಸಂಸ್ಥೆಯು ತನ್ನ ಭಾಗದ ಬಡ್ಡಿ ಹಣವನ್ನು ಭರಿಸಲು ನಿರಾಕರಿಸಿದ್ದು ಇದನ್ನು ವಿಷಯ ಸಮಿತಿಯು 2002-03 ಮತ್ತು 2003-04ನೇ ಸಾಲಿನಲ್ಲಿ ಪರಿಶೀಲಿಸಿ ಈ ಬಡ್ಡಿ ಹಣವನ್ನು ಸಹ ಸರ್ಕಾರವೇ ಭರಿಸಬೇಕೆಂದು ಶಿಫಾರಸ್ಸು ಮಾಡಿದೆ. ನಬಾರ್ಡ್ ಸಂಸ್ಥೆ ನೀಡಬೇಕಾಗಿದ್ದ ಈ ಬಡ್ಡಿ ಹಣ ರೂ.5.52 ಕೋಟಿಗಳನ್ನು ಸರ್ಕಾರವೇ ಭರಿಸಲು 2003-04ರ ವಿಷಯ ಸಮಿತಿಯು ಶಿಫಾರಸ್ಸು ಮಾಡಿದೆ. 2003-04ರ ವಿಷಯ ಸಮಿತಿಯ ವರದಿಯ ಪ್ರಕಾರ ದಿನಾಂಕ: 31.3.2003ಕ್ಕೆ ಬಾಕಿ ಇರುವ ಪ್ರಕರಣಗಳು 14002 ಇದ್ದು ಇವುಗಳ ಪರಿಹಾರಧನದ ಮೊತ್ತವು ರೂ.22.43 ಕೋಟಿಗಳಾಗಿರುತ್ತದೆ. ಈಗ ಸರ್ಕಾರವು ರೂ.22.00 ಕೋಟಿಗಳನ್ನು (ರೂ.ಇಪ್ಪತ್ತೆರಡು ಕೋಟಿಗಳು ಮಾತ್ರ) ವಿಫಲಬಾವಿ ಪರಿಹಾರಧನವನ್ನಾಗಿ (ಅಸಲು ಮತ್ತು ಬಡ್ಡಿ ಸಹಿತ) ಮಂಜೂರು ಮಾಡಲು ತೀರ್ಮಾನಿಸಿದೆ. ಅಂತೆಯೇ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ: 99 ಸಿಎಲ್‌ಎಸ್ 2002, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ವಿಫಲಬಾವಿ ಪರಿಹಾರ ಧನ ಯೋಜನೆಯಲ್ಲಿ ರೂ. 22.00 ಕೋಟಿ (ರೂ. ಇಪ್ಪತ್ತೆರಡು ಕೋಟಿಗಳು ಮಾತ್ರ)ಗಳನ್ನು ಬಾಕಿ ಉಳಿದ ಸಾಲ ಮತ್ತು ಬಡ್ಡಿ ಹಣವನ್ನು ಮನ್ನಾ ಮಾಡಲು ಮಂಜೂರು ನೀಡಿದೆ ಈ ಪೈಕಿ ಪ್ರಸಕ್ತ ಸಾಲಿನ ಆಯವ್ಯಯದಲ್ಲಿರುವ ರೂ.1.00 ಕೋಟಿಯನ್ನು (ರೂ.ಒಂದು ಕೋಟಿ ಮಾತ್ರ) ಮೊದಲ ಕಂತಾಗಿ ಬಿಡುಗಡೆ ಮಾಡಲಾಗಿದೆ.

ಈ ಉದ್ದೇಶಕ್ಕೆ ತಗಲುವ ವೆಚ್ಚವನ್ನು 2003-2004ನೇ ಸಾಲಿನಲ್ಲಿ 2425-ಸಹಕಾರ-107-ಸಾಲನೀಡಿಕೆ ಸಹಕಾರಿ ಸಂಸ್ಥೆಗಳಿಗೆ ಸಹಾಯ-03-ಸಣ್ಣ ನೀರಾವರಿ-01- ವಿಫಲಬಾವಿಗಳಿಗೆ ಪರಿಹಾರ ನಿಧಿ- 101 - ಸಹಾಯಾನುದಾನ - (2425-00-107-3-01) - ಯೋಜನೇತರ ಎಂಬ ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ನಿಬಂಧಕರು ಹಣ ಸ್ವೀಕೃತಿ ರಸೀತಿಯ ಮೇಲೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಇವರ ಮೇಲು ರುಜು ಪಡೆದು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ:1214:ವೆಚ್ಚ2:03 ದಿನಾಂಕ:11-9-2003 ರಲ್ಲಿ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1197

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** 2002ನೇ ಹಿಂಗಾರಿನ ಅವಧಿಯಲ್ಲಿ ಬೆಳೆ ಸಾಲ ಪಡೆದಂತಹ ರೈತರಿಗೆ ಬಡ್ಡಿ ರಿಯಾಯಿತಿ ನೀಡುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ 109 ಸಿಎಲ್‌ಎಸ್ 2002, ದಿನಾಂಕ 21-10-2002.

2) ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ 124 ಸಿಎಲ್‌ಎಸ್ 2002, ದಿನಾಂಕ 18-12-2002.

3) ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ 124 ಸಿಎಲ್‌ಎಸ್ 2002, ದಿನಾಂಕ 29-03-2003.

**ಪ್ರಸ್ತಾವನೆ:**

ರಾಜ್ಯದಲ್ಲಿ 2002ನೇ ಸಾಲಿನ ಮುಂಗಾರು ಮಳೆಯು ವಿಫಲಗೊಂಡಿರುವುದರಿಂದ ರಾಜ್ಯದ ಎಲ್ಲಾ ತಾಲ್ಲೂಕುಗಳಲ್ಲಿ ದಿನಾಂಕ 01.03.2002 ರಿಂದ 30.09.2002ರ ಅವಧಿಯಲ್ಲಿ ರೈತರಿಗೆ ನೀಡಿದ ಅಲ್ಪಾವಧಿ ಬೆಳೆ ಸಾಲಗಳ ಮೇಲಿನ ಪೂರ್ಣ ಬಡ್ಡಿಯನ್ನು ಮನ್ನಾ ಮಾಡುವ ಯೋಜನೆಯನ್ನು ಮೇಲೆ ಓದಲಾದ ಆದೇಶಗಳಲ್ಲಿ ಜಾರಿಗೊಳಿಸಲಾಗಿದೆ.

ಸದರಿ ಸಾಲಿನಲ್ಲಿ ಹಿಂಗಾರು ಮಳೆಯೂ ಸಹ ವಿಫಲಗೊಂಡಿರುವುದರಿಂದ ರಾಜ್ಯದ ಎಲ್ಲಾ ತಾಲ್ಲೂಕುಗಳಲ್ಲಿ ಪಿ.ಎ.ಸಿ.ಎಸ್., ಡಿ.ಸಿ.ಸಿ.ಬ್ಯಾಂಕ್‌ಗಳಿಗೆ ಮತ್ತು ವಾಣಿಜ್ಯ ಬ್ಯಾಂಕುಗಳಿಗೆ ಹೊಂದಾಣಿಕೆಯಾಗಿರುವ ಪಿಎಸಿಎಸ್ ಹಾಗೂ ಪಿಕಾರ್ಡ್ ಬ್ಯಾಂಕುಗಳು 2002ರ ಹಿಂಗಾರಿನ ಅವಧಿಯಲ್ಲಿ ರೈತರಿಗೆ ನೀಡಿರುವ ಎಲ್ಲಾ ಅಲ್ಪಾವಧಿ ಬೆಳೆ ಸಾಲಗಳ ಮೇಲಿನ ಬಡ್ಡಿ ಮನ್ನಾ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದುದರಿಂದ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ 112 ಸಿಎಲ್‌ಎಸ್ 2003, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ತಿಳಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2002ನೇ ಹಿಂಗಾರಿನ ಅವಧಿಯಲ್ಲಿ ರಾಜ್ಯದಲ್ಲಿನ ಪಿ.ಎ.ಸಿ.ಎಸ್., ಡಿ.ಸಿ.ಸಿ.ಬ್ಯಾಂಕ್‌ಗಳಿಗೆ ಮತ್ತು ವಾಣಿಜ್ಯ ಬ್ಯಾಂಕುಗಳಿಗೆ ಹೊಂದಾಣಿಕೆಯಾಗಿರುವ ಪಿಎಸಿಎಸ್ ಮತ್ತು ಪಿಕಾರ್ಡ್ ಬ್ಯಾಂಕುಗಳು ರೈತರಿಗೆ ನೀಡಿರುವ ಎಲ್ಲಾ ಅಲ್ಪಾವಧಿ ಬೆಳೆ ಸಾಲಗಳ ಮೇಲಿನ ಪೂರ್ಣ ಬಡ್ಡಿಯನ್ನು ಮನ್ನಾ ಮಾಡಲಾಗಿದೆ ಮತ್ತು ತತ್ಸಂಬಂಧವಾದ ವೆಚ್ಚವನ್ನು ಭರಿಸಲು ರೂ.40.30 ಕೋಟಿಗಳನ್ನು (ರೂಪಾಯಿ ನಲವತ್ತು ಕೋಟಿ ಮೂವತ್ತು ಲಕ್ಷಗಳು ಮಾತ್ರ) ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ಈ ಮೊಬಲಗನ್ನು ಪಡೆಯಲು ಸರ್ಕಾರಕ್ಕೆ ಸಹಕಾರಿ ಲೆಕ್ಕಪರಿಶೋಧನಾ ಇಲಾಖೆಯಿಂದ ದೃಢೀಕೃತವಾದ ಬಿಲ್ಲನ್ನು ಸಲ್ಲಿಸತಕ್ಕದ್ದು. ಸದರಿ ಬಿಲ್ಲನ್ನು ಪರಿಶೀಲಿಸಿದ ನಂತರ ಹಣವನ್ನು ಬಿಡುಗಡೆ ಮಾಡಲಾಗುವುದು.

ಇನ್ನು ಮುಂದೆ ಅಲ್ಪಾವಧಿ ಬೆಳೆ ಸಾಲಗಳ ಮೇಲೆ ಸುಸ್ತಿ ಬಡ್ಡಿಯನ್ನು ವಿಧಿಸತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ:1207:ವೆಚ್ಚ 2:03 ದಿ: 11.9.03ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1198

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** ಪಿಕಾರ್ಡ್ ಬ್ಯಾಂಕುಗಳು ನೀಡಿರುವ ದೀರ್ಘಾವಧಿ ಸಾಲಗಳ ಮೇಲಿನ ಬಡ್ಡಿ ರಿಯಾಯಿತಿ.

**ಓದಲಾಗಿದೆ:** ಸಚಿವ ಸಂಪುಟದ ತೀರ್ಮಾನ ಸಂಖ್ಯೆ:ಸಿ-276 ದಿನಾಂಕ: 28.08.2003.

**ಪೀಠಿಕೆ:**

ರಾಜ್ಯದಲ್ಲಿ ಸತತ ಮೂರು ವರ್ಷಗಳಿಂದ ಇರುವ ಬರಗಾಲವು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ(ಪಿಕಾರ್ಡ್) ಬ್ಯಾಂಕುಗಳಿಂದ ದೀರ್ಘಾವಧಿ ಸಾಲ ಪಡೆದಿರುವ ರೈತರ ಮರುಪಾವತಿ ಸಾಮರ್ಥ್ಯವನ್ನು ಕುಂಠಿತಗೊಳಿಸಿದೆ. ಕೃಷಿ ಉತ್ಪನ್ನಗಳ ಬೆಲೆ ಕುಸಿತ ಮತ್ತು ಕೆಲವು ಬೆಳೆಗಳಿಗೆ ತಗಲಿರುವ ರೋಗಗಳು ರೈತರ ದುಃಖವನ್ನು ಇಮ್ಮಡಿಗೊಳಿಸಿವೆ. ದಿನಾಂಕ 31.03.2003ಕ್ಕೆ ಕಸ್ಕಾರ್ಡ್ ಬ್ಯಾಂಕು ದೃಢೀಕರಿಸಿದ ತಃಖ್ತೆ ಪ್ರಕಾರ ಸುಸ್ತಿ ಅಸಲು ತಗಾದೆ 233.75 ಕೋಟಿರೂ ಮತ್ತು ಚಾಲ್ತಿ ಅಸಲು ತಗಾದೆ 80.39 ಕೋಟಿರೂ ಇದ್ದು ಇದಕ್ಕನುಗುಣವಾಗಿ ಸುಸ್ತಿಸಾಲಗಳ ಮೇಲಿನ ಬಡ್ಡಿಯು 178.32 ಕೋಟಿರೂ ಮತ್ತು ಚಾಲ್ತಿ ಸಾಲಗಳ ಮೇಲಿನ ಬಡ್ಡಿಯು 87.93 ಕೋಟಿರೂ ಇರುತ್ತದೆ. ಪ್ರಸಕ್ತ ರೈತರ ಸಂಕಷ್ಟವನ್ನು ಪರಿಗಣಿಸಿ ರೈತರು ದಿನಾಂಕ 31.03.2003ಕ್ಕೆ ಬಾಕಿಯಿರುವ ಚಾಲ್ತಿ ಸಾಲಿನ ಅಸಲನ್ನು ಶೇ.9ರ ಬಡ್ಡಿ ಸಹಿತ ಪಿಕಾರ್ಡ್ ಬ್ಯಾಂಕುಗಳಿಗೆ ಮರುಪಾವತಿಸಿದಲ್ಲಿ ಶೇ.9ಕ್ಕಿಂತ ಹೆಚ್ಚಿನ ಸರಾಸರಿ ಶೇ.5.5 ರಷ್ಟು ಬಡ್ಡಿಯನ್ನು ಮನ್ನಾ/ರಿಯಾಯಿತಿ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ 115 ಸಿಎಲ್‌ಎಸ್ 2002, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ದಿನಾಂಕ 31.03.2003ಕ್ಕೆ ಬಾಕಿಯಿರುವ ಚಾಲ್ತಿ ಸಾಲಿನ ಅಸಲನ್ನು ರೈತರು ಶೇ.9ರ ಬಡ್ಡಿ ಸಹಿತ ಪಿಕಾರ್ಡ್ ಬ್ಯಾಂಕುಗಳಿಗೆ ಮರುಪಾವತಿಸಿದಲ್ಲಿ ಶೇ.9ಕ್ಕಿಂತ ಹೆಚ್ಚಿನ ಬಡ್ಡಿಯನ್ನು ಮನ್ನಾ ಮಾಡಲು ಮತ್ತು ತತ್ಸಂಬಂಧವಾದ ಮೊಬಲಗು 33.00 ಕೋಟಿರೂಗಳನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಭರ್ತಿ ಮಾಡಿಕೊಡಲು ಮಂಜೂರಾತಿ ನೀಡಲಾಗಿದೆ. ಈ ಸೌಲಭ್ಯವು ದಿನಾಂಕ 31.03.2004ರೊಳಗೆ ಮೇಲಿನಂತೆ ಮರುಪಾವತಿ ಮಾಡುವ ಎಲ್ಲಾ ರೈತರಿಗೂ ಅನ್ವಯವಾಗುತ್ತದೆ.

ರೈತರು ಈಗಾಗಲೇ ಶೇ.9ಕ್ಕಿಂತ ಹೆಚ್ಚಿನ ಚಾಲ್ತಿ ಸಾಲಿನ ಬಡ್ಡಿಯನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಪಾವತಿಸಿದ್ದಲ್ಲಿ ಅದನ್ನು ಅವರಿಂದ ಬರಬೇಕಾದ ಮುಂದಿನ ಬಾಕಿಗಳಿಗೆ ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು.

ಕಸ್ಕಾರ್ಡ್ ಬ್ಯಾಂಕು ವಸೂಲಾದ ಅಸಲು ಮತ್ತು ಅದರ ಮೇಲಿನ ಬಡ್ಡಿ ರಿಯಾಯಿತಿಗೆ ಸಂಬಂಧಪಟ್ಟಂತೆ ಮಾಸಿಕ ಪ್ರಗತಿ ವರದಿಗಳನ್ನು ಸಹಕಾರ ಮತ್ತು ಆರ್ಥಿಕ ಇಲಾಖೆಗಳಿಗೆ ಸಲ್ಲಿಸತಕ್ಕದ್ದು. ರೈತರಿಂದ ಚಾಲ್ತಿ ಸಾಲಿನ ಅಸಲು ಮತ್ತು ಶೇ.9ರ ಬಡ್ಡಿ ವಸೂಲಿಯಾದ ನಂತರ, ಬಡ್ಡಿ ರಿಯಾಯಿತಿ ಕ್ಲೇಮು ಬಿಲ್ಲನ್ನು ಕಸ್ಕಾರ್ಡ್ ಬ್ಯಾಂಕು ಸಹಕಾರಿ ಲೆಕ್ಕಪರಿಶೋಧನಾ ಇಲಾಖೆಯಿಂದ ದೃಢೀಕರಿಸಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಸದರಿ ಬಿಲ್ಲನ್ನು ಸಹಕಾರಿ ಲೆಕ್ಕ ಪರಿಶೋಧನಾ ಇಲಾಖೆ ಮತ್ತು ರಾಜ್ಯ ಲೆಕ್ಕಪತ್ರ ಇಲಾಖೆಗಳಿಂದ ಜಂಟಿಯಾಗಿ ಪರಿಶೀಲಿಸಿದ ನಂತರ ಹಣ ಬಿಡುಗಡೆ ಮಾಡಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/1208/ವೆಚ್ಚ-2/03 ದಿನಾಂಕ:11-09-03ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1199

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** ಪಿಕಾರ್ಡ್ ಬ್ಯಾಂಕುಗಳು ತೋಟಗಾರಿಕೆ ಬೆಳೆಗಳಿಗೆ ನೀಡಿರುವ ದೀರ್ಘಾವಧಿ ಸಾಲಗಳ ಮೇಲಿನ ಬಡ್ಡಿ ರಿಯಾಯಿತಿ.

**ಓದಲಾಗಿದೆ:** ಸಚಿವ ಸಂಪುಟದ ತೀರ್ಮಾನ ಸಂಖ್ಯೆ:ಸಿ-276 ದಿನಾಂಕ: 28.08.2003.

**ಪೀಠಿಕೆ:**

ರಾಜ್ಯದಲ್ಲಿ ಸತತ ಮೂರು ವರ್ಷಗಳಿಂದ ಇರುವ ಬರಗಾಲವು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ (ಪಿಕಾರ್ಡ್) ಬ್ಯಾಂಕುಗಳಿಂದ ದೀರ್ಘಾವಧಿ ಸಾಲ ಪಡೆದಿರುವ ರೈತರ ಮರುಪಾವತಿ ಸಾಮರ್ಥ್ಯವನ್ನು ಕುಂಠಿತಗೊಳಿಸಿದೆ. ಕೃಷಿ ಉತ್ಪನ್ನಗಳ ಬೆಲೆ ಕುಸಿತ ಮತ್ತು ಕೆಲವು ಬೆಳೆಗಳಿಗೆ ತಗುಲಿರುವ ರೋಗಗಳು ರೈತರ ದುಃಖವನ್ನು ಇಮ್ಮಡಿಗೊಳಿಸಿವೆ. ದಿನಾಂಕ 31.03.2003ಕ್ಕೆ ಕಸ್ಕಾರ್ಡ್ ಬ್ಯಾಂಕು ದೃಢೀಕರಿಸಿದ ತಃಖ್ತೆಯ ಪ್ರಕಾರ ಸುಸ್ತಿ ಅಸಲು ತಗಾದೆ 233.75 ಕೋಟಿರೂ ಮತ್ತು ಚಾಲ್ತಿ ಅಸಲು ತಗಾದೆ 80.39 ಕೋಟಿರೂ ಇದ್ದು ಇದಕ್ಕನುಗುಣವಾಗಿ ಸುಸ್ತಿಸಾಲಗಳ ಮೇಲಿನ ಬಡ್ಡಿಯು 178.32 ಕೋಟಿರೂ ಮತ್ತು ಚಾಲ್ತಿ ಸಾಲಗಳ ಮೇಲಿನ ಬಡ್ಡಿಯು 87.93 ಕೋಟಿರೂ ಇರುತ್ತದೆ. ಅಲ್ಲದೆ ತೋಟಗಾರಿಕೆ ಬೆಳೆಗಳಿಗೆ ಸಂಬಂಧಪಟ್ಟಂತೆ ಸುಸ್ತಿ ಅಸಲು ತಗಾದೆಯು 18.21 ಕೋಟಿರೂ ಮತ್ತು ಚಾಲ್ತಿ ಅಸಲು ತಗಾದೆಯು 9.26 ಕೋಟಿರೂ ಇದ್ದು ಇದಕ್ಕನುಗುಣವಾಗಿ ಸುಸ್ತಿಸಾಲಗಳ ಮೇಲಿನ ಬಡ್ಡಿಯು 26.28 ಕೋಟಿರೂ ಮತ್ತು ಚಾಲ್ತಿ, ಸಾಲಗಳ ಮೇಲಿನ ಬಡ್ಡಿಯು 20.00 ಕೋಟಿರೂ ಇರುತ್ತದೆ. ಪ್ರಸಕ್ತ ರೈತರ ಸಂಕಷ್ಟವನ್ನು ಮತ್ತು ತೋಟಗಾರಿಕೆ ಬೆಳೆಗಳಿಗೆ ತೀವ್ರ ನಷ್ಟವುಂಟಾಗಿರುವುದನ್ನು ಪರಿಗಣಿಸಿ ರೈತರು ದಿನಾಂಕ 31.03.2003ಕ್ಕೆ ತೋಟಗಾರಿಕೆ ಬೆಳೆಗಳಿಗೆ (ದ್ರಾಕ್ಷಿ ದಾಳಿಂಬೆ ಮತ್ತು ನಿಂಬೆ) ಬಾಕಿಯಿರುವ ಚಾಲ್ತಿ ಸಾಲಿನ ಅಸಲನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಮರುಪಾವತಿಸಿದಲ್ಲಿ ಹೊರಬಾಕಿ (outstanding) ಸಾಲಗಳ ಮೇಲಿನ ಚಾಲ್ತಿ ಬಡ್ಡಿಯ ಮೊಬಲಗು 20.00 ಕೋಟಿರೂಗಳನ್ನು ಮನ್ನಾ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯು 115 ಸಿಎಲ್‌ಎಸ್ 2002 (ಭಾಗ), ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ದಿನಾಂಕ 31.03.2003ಕ್ಕೆ ತೋಟಗಾರಿಕೆ ಬೆಳೆಗಳಿಗೆ (ದ್ರಾಕ್ಷಿ, ದಾಳಿಂಬೆ ಮತ್ತು ನಿಂಬೆ) ಬಾಕಿಯಿರುವ ಚಾಲ್ತಿ ಸಾಲಿನ ಅಸಲನ್ನು ರೈತರು ಪಿಕಾರ್ಡ್ ಬ್ಯಾಂಕುಗಳಿಗೆ ಮರುಪಾವತಿಸಿದಲ್ಲಿ ಹೊರಬಾಕಿ (outstanding) ಸಾಲಗಳ ಮೇಲಿನ ಚಾಲ್ತಿ ಬಡ್ಡಿಯನ್ನು ಮನ್ನಾ ಮಾಡಲು ಮತ್ತು ತತ್ಸಂಬಂಧವಾದ ಮೊಬಲಗು 20.00 ಕೋಟಿರೂಗಳನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಭರ್ತಿ ಮಾಡಿಕೊಡಲು ಮಂಜೂರಾತಿ ನೀಡಲಾಗಿದೆ. ಈ ಸೌಲಭ್ಯವು ದಿನಾಂಕ 31.03.2004ರೊಳಗೆ ಮೇಲಿನಂತೆ ಮರುಪಾವತಿ ಮಾಡುವ ಎಲ್ಲಾ ರೈತರಿಗೂ ಅನ್ವಯವಾಗುತ್ತದೆ.

ರೈತರು ಈಗಾಗಲೇ ಚಾಲ್ತಿ ಸಾಲಿನ ಬಡ್ಡಿಯನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಪಾವತಿಸಿದ್ದಲ್ಲಿ ಅದನ್ನು ಅವರಿಂದ ಬರಬೇಕಾದ ಮುಂದಿನ ಬಾಕಿಗಳಿಗೆ ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು.

ಕಸ್ಕಾರ್ಡ್ ಬ್ಯಾಂಕು ವಸೂಲಾದ ಅಸಲು ಮತ್ತು ಬಡ್ಡಿ ಮನ್ನಾಗೆ ಸಂಬಂಧಪಟ್ಟಂತೆ ಮಾಸಿಕ ಪ್ರಗತಿ ವರದಿಗಳನ್ನು ಸಹಕಾರ ಇಲಾಖೆ ಮತ್ತು ಆರ್ಥಿಕ ಇಲಾಖೆಗಳಿಗೆ ಸಲ್ಲಿಸತಕ್ಕದ್ದು. ರೈತರಿಂದ ಚಾಲ್ತಿ ಸಾಲಿನ ಅಸಲು ವಸೂಲಿಯಾದ ನಂತರ, ಬಡ್ಡಿ ರಿಯಾಯಿತಿ ಕ್ಲೇಮು ಬಿಲ್ಲನ್ನು ಕಸ್ಕಾರ್ಡ್ ಬ್ಯಾಂಕು ಸಹಕಾರಿ ಲೆಕ್ಕಪರಿಶೋಧನಾ ಇಲಾಖೆಯಿಂದ ದೃಢೀಕರಿಸಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಸದರಿ ಬಿಲ್ಲನ್ನು ಪರಿಶೀಲಿಸಿದ ನಂತರ ಹಣ ಬಿಡುಗಡೆ ಮಾಡಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/1208/ವೆಚ್ಚ-2/03 ದಿನಾಂಕ:15-09-03ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1200

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** ಕೆ.ಸಿ.ಸಿ. ಬ್ಯಾಂಕ್ ಧಾರವಾಡ ಇದರ ಪುನಶ್ಚೇತನಗೊಳಿಸಲು ಬೆಳೆಸಾಲ: ಮಧ್ಯಮಾವಧಿ ಸಾಲದ ಮೇಲಿನ ಬಡ್ಡಿ ಮನ್ನಾ ಕುರಿತು.

**ಓದಲಾಗಿದೆ:** ಸಚಿವ ಸಂಪುಟದ ತೀರ್ಮಾನ ದಿನಾಂಕ: 28.08.2003.

**ಪ್ರಸ್ತಾವನೆ:**

ಧಾರವಾಡ ಕೆ.ಸಿ.ಸಿ. ಬ್ಯಾಂಕು ರೈತರಿಗೆ ಬೆಳೆ ಸಾಲಗಳನ್ನು ನೀಡಿದ್ದು ಪ್ರಕೃತಿ ವಿಕೋಪದಿಂದ ಬೆಳೆ ವಿಫಲವಾದ ಪ್ರಯುಕ್ತ ಸಾಲ ವಸೂಲಿಯಾಗದೆ ಬ್ಯಾಂಕಿನ ಆರ್ಥಿಕ ಪರಿಸ್ಥಿತಿಯು ಅಪಾಯಕಾರಿ ಹಂತವನ್ನು ಮುಟ್ಟಿದೆ. ಈ ಬ್ಯಾಂಕು ಬ್ಯಾಂಕಿಂಗ್ ರೆಗ್ಯುಲೇಷನ್ ಆ್ಯಕ್ಟ್ 1989ರ ಕಲಂ 11(1)ರ ವ್ಯಾಪ್ತಿಗೆ ಒಳಪಟ್ಟಿದ್ದು ಆರ್.ಬಿ.ಐ. ದಿನಾಂಕ 31.03.2004ರವರೆಗೆ ಸದರಿ ಕಲಂನಿಂದ ವಿನಾಯಿತಿ ನೀಡಿರುತ್ತದೆ. ದಿನಾಂಕ 31.03.2003ಕ್ಕೆ ಎಲ್ಲಾ ಅಲ್ಪಾವಧಿ ಮತ್ತು ಮಧ್ಯಮಾವಧಿ ಸುಸ್ತಿ ಸಾಲಗಳ ಪ್ರಮಾಣವು 169.57 ಕೋಟಿ ರೂಗಳಿರುತ್ತದೆ ಹಾಗೂ ಸದರಿ ಸಾಲಗಳ ಮೇಲಿನ ಸಂಚಿತವಾಗಿರುವ ಬಡ್ಡಿ ಪ್ರಮಾಣವು ರೂ.102.89 ಕೋಟಿಗಳಾಗಿರುತ್ತದೆ. ಈ ಸುಸ್ತಿ ಸಾಲಗಳ ಮೇಲಿನ ಬಡ್ಡಿಯನ್ನು ಪೂರ್ಣವಾಗಿ ಮನ್ನಾ ಮಾಡಿದಲ್ಲಿ ಶೇ.50 ರಷ್ಟು ಸುಸ್ತಿ ಸಾಲಗಳು ವಸೂಲಿಯಾಗಬಹುದೆಂದು ಅಂದಾಜು ಮಾಡಲಾಗಿದೆ.

ಇದರಿಂದ ಬ್ಯಾಂಕಿನ ಆರ್ಥಿಕ ಪರಿಸ್ಥಿತಿಯು ಗಣನೀಯವಾಗಿ ಸುಧಾರಣೆಯಾಗಿ ರೈತರಿಗೆ ಪುನಃ ಸಾಲವನ್ನು ನೀಡುವ ಶಕ್ತಿಯನ್ನು ಪಡೆಯುತ್ತದೆ ಎಂದು ಭಾವಿಸಲಾಗಿದೆ. ಆದ್ದರಿಂದ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ರೈತರಿಗೆ ನೀಡಿರುವ ಎಲ್ಲಾ ಸುಸ್ತಿ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳ ಮೇಲಿನ ಪೂರ್ಣ ಬಡ್ಡಿಯನ್ನು ಮನ್ನಾ ಮಾಡಲು ಸರ್ಕಾರವು ತೀರ್ಮಾನಿಸಿದೆ.

ಆದುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ 293 ಸಿಸಿಬಿ 2003, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕೆ.ಸಿ.ಸಿ. ಬ್ಯಾಂಕ್ ನಿ, ಧಾರವಾಡ ಇದರ ದಿನಾಂಕ 30.06.2003ಕ್ಕೆ ಬಾಕಿಯಿರುವ ಎಲ್ಲಾ ಸುಸ್ತಿ ಬೆಳೆಸಾಲ ಮತ್ತು ಮಧ್ಯಮಾವಧಿ ಸಾಲಗಳ ಮೇಲಿನ ಪೂರ್ತಿ ಬಡ್ಡಿಯನ್ನು ಮನ್ನಾ ಮಾಡಲು ಮಂಜೂರಾತಿ ನೀಡಿದೆ. ಈ ಸೌಲಭ್ಯವು ದಿನಾಂಕ 31.03.2004ರೊಳಗೆ ಪೂರ್ಣವಾಗಿ ಅಸಲನ್ನು ಮರುಪಾವತಿ ಮಾಡುವ ರೈತರಿಗೆ ಮಾತ್ರ ಲಭ್ಯವಿರುತ್ತದೆ.

ಈ ಸಂಬಂಧದ ನಷ್ಟವನ್ನು ಸರ್ಕಾರ, ಅಪೆಕ್ಸ್ ಬ್ಯಾಂಕ್ ಮತ್ತು ಕೆ.ಸಿ.ಸಿ.ಬ್ಯಾಂಕು ಅನುಕ್ರಮವಾಗಿ ಶೇ. 50 : 25 : 25ರ ಅನುಪಾತದಲ್ಲಿ ಭರಿಸತಕ್ಕದ್ದು. ಶೇ.50ರ ಸರ್ಕಾರದ ವಂತಿಕೆಯನ್ನು ಭರಿಸಲು ರೂ.25.00 ಕೋಟಿ (ರೂ. ಇಪ್ಪತ್ತೈದು ಕೋಟಿಗಳು ಮಾತ್ರ) ಗಳ ಪಾವತಿಗೆ ಮಂಜೂರಾತಿ ನೀಡಿದೆ.

ಕೆ.ಸಿ.ಸಿ. ಬ್ಯಾಂಕು ಸಹಕಾರ ಸಂಘಗಳ ನಿಬಂಧಕರ ಮೂಲಕ ಸುಸ್ತಿಸಾಲದ ಮೊಬಲಗು ರೂ.169.57ಗಳ ವಸೂಲಾತಿ ಬಗ್ಗೆ ಪ್ರಗತಿ ತಃಖ್ತೆಗಳನ್ನು ಸಾಲವಾರು ಮತ್ತು ರೈತವಾರು ಪ್ರತಿ ತಿಂಗಳು ಸಹಕಾರ ಇಲಾಖೆ ಮತ್ತು ಆರ್ಥಿಕ ಇಲಾಖೆಗೆ ಸಲ್ಲಿಸತಕ್ಕದ್ದು ಮತ್ತು ಅಸಲು ವಸೂಲಿಯಾದ ನಂತರ ಬಡ್ಡಿ ಮನ್ನಾ ಮೊಬಲಗನ್ನು ಸರ್ಕಾರದಿಂದ ಪಡೆಯಲು ಬಿಲ್ಲನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/1206/ವೆಚ್ಚ-2/03 ದಿನಾಂಕ:15-09-03ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1201

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** ಗುಲ್ಬರ್ಗಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಪುನಶ್ಚೇತನಕ್ಕಾಗಿ ಷೇರು ಬಂಡವಾಳ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಸಚಿವ ಸಂಪುಟದ ತೀರ್ಮಾನ ಸಂಖ್ಯೆ: ಸಿ.276, ದಿನಾಂಕ: 28.08.2003.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆಯಲ್ಲಿ ಮೂರು ವರ್ಷಗಳಿಂದ ಸತತ ಬರ ಪರಿಸ್ಥಿತಿ ಇರುವ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು ರೈತರಿಗೆ ನೀಡಿರುವ ಸಾಲ ವಸೂಲಿಯಾಗದೆ ಬ್ಯಾಂಕಿನ ಆರ್ಥಿಕ ಪರಿಸ್ಥಿತಿಯು ತುಂಬಾ ಸಂಕಷ್ಟದಲ್ಲಿದ್ದು, ಈ ಬ್ಯಾಂಕು ಬ್ಯಾಂಕಿಂಗ್ ನಿಯಂತ್ರಣ ಕಾಯ್ದೆ 1949ರ ಕಲಂ 11(1)ರ ವ್ಯಾಪ್ತಿಗೆ ಒಳಪಟ್ಟಿದ್ದು ಆರ್.ಬಿ.ಐ. ದಿನಾಂಕ: 31.03.2004ರವರೆಗೆ ಸದರಿ ಕಲಂ ನಿಂದ ವಿನಾಯಿತಿ ನೀಡಿರುತ್ತದೆ. ಸರ್ಕಾರವು ಈ ಬ್ಯಾಂಕಿನ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಹಾಗೂ ಇದರ ಪುನಶ್ಚೇತನಕ್ಕಾಗಿ ಷೇರು ಬಂಡವಾಳ ರೂಪದಲ್ಲಿ ರೂ. 3-00 ಕೋಟಿಗಳನ್ನು ಮಂಜೂರು ಮಾಡಲು ತೀರ್ಮಾನಿಸಿದೆ. ಅದರಂತೆ ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ 294 ಸಿಸಿಬಿ 2003, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಗುಲ್ಬರ್ಗಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ ಇದಕ್ಕೆ ಸರ್ಕಾರದಿಂದ ಷೇರು ಬಂಡವಾಳ ರೂಪದಲ್ಲಿ ರೂ.193.00 ಲಕ್ಷಗಳನ್ನು ಮೊದಲ ಕಂತಾಗಿ (ರೂ. ಒಂದುನೂರ ತ್ತೊಂಭತ್ತು ಮೂರು ಲಕ್ಷಗಳು ಮಾತ್ರ) ಮಂಜೂರು ಮಾಡಿದೆ.

ಈ ಹಣವನ್ನು ಸಹಕಾರ ಸಂಘಗಳ ನಿಬಂಧಕರು ಹಣ ಸ್ವೀಕೃತಿ ರಸೀತಿಯ ಮೇಲೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಇವರ ಮೇಲು ರುಜು ಪಡೆದು ಪಡೆಯತಕ್ಕದ್ದು.

ಈ ಉದ್ದೇಶಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 4425- ಸಹಕಾರದ ಮೇಲಣ ಬಂಡವಾಳ ವೆಚ್ಚ 108 ಇತರ ಸಹಕಾರ ಸಂಸ್ಥೆಗಳಲ್ಲಿ ಬಂಡವಾಳ ಹೂಡಿಕೆ 132 ಬಂಡವಾಳ ವೆಚ್ಚಗಳು (ಲೆಕ್ಕಶೀರ್ಷಿಕೆ 4425- 00-108-0-49,) (ಯೋಜನೆ) ಇದರಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:1215/ವೆಚ್ಚ-2/03 ದಿನಾಂಕ:11-9-03ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1202

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.